ಮೊದಲನೆಯ ಮುದ್ರಣ
ನವೆಂಬರ್, ೧೯೫೪

ರಕ್ಷಾಪತ್ರದ ರಚನೆ
ಶ್ರೀ ಆರ್. ಎಸ್. ನಾಯ್ಡು.

ಪುಸ್ತಕದ ಮುದ್ರಣ
ಶ್ರೀ ಷಣ್ಮುಗಾನಂದ ಮುದ್ರಣಾಲಯ
ಅರಳೇಪೇಟೆ, ಬೆಂಗಳೂರು-೨.



ಪ್ರಕಾಶಕರು
ಅರುಣೋದಯ ಪ್ರಕಾಶನ
ಅರಳೇಪೇಟೆ, ಬೆಂಗಳೂರು-೨.



ಮೈಸೂರಿನ ಸೋಲ್ ಏಜೆಂಟರು
ಜೆ. ನಾನುಮಲ್ ಅಂಡ್ ಸನ್ಸ್,
ಸಯ್ಯಾಜಿರಾವ್ ರಸ್ತೆ, ಮೈಸೂರು.

ಗದಗಿನ ಸೋಲ್ ಏಜೆಂಟರು
ಹೆಚ್. ಸಿ. ಥಡಾಸ್
ರೈಲ್ವೆ ಸ್ಟೇಷನ್ ರಸ್ತೆ, ಗದಗ.

ಬೆಲೆ
ಒಂದು ರೂಪಾಯಿ ಮಾತ್ರ.

ಅಖಿಲನ್

# ಗೆಳತಿ



ಕನ್ನಡದಲ್ಲಿ
ರಾಮನ್




ಅರುಣೋದಯ ಪ್ರಕಾಶನ
ಅರಳೇಪೇಟೆ — ಬೆಂಗಳೂರು ೨



# ಮುನ್ನುಡಿ

'ಪ್ರೀತಿಯಲ್ಲಿ ಅಚಲ ನಂಬಿಕೆ ಕೊಂಡವನು ನಾನು. ಎಂದೋ ಬರ
ಿರುವ ಆ ಪ್ರೀತಿಯ ಪ್ರಪಂಚಕ್ಕಾಗಿ ಇಂದಿನಿಂದಲೇ ಕನಸು ಕಾಣುವವನು:
ಆ ಪ್ರಪಂಚದಲ್ಲಿ ಜಾತಿ, ಸಮಯ, ಬಣ್ಣ, ಹಣ ಎಲ್ಲವೂ ಪ್ರೀತಿಗೆ ತಲೆ
ಬಾಗಿ, ದಾರಿ ಬಿಟ್ಟು, ಪ್ರೀತಿಯ ಸೇವಕರಾಗಿ ನಿಲ್ಲುತ್ತವೆ; ಅಥವಾ ಪ್ರೀತಿ
ಯಲ್ಲಿ ನಾಶವಾಗುತ್ತವೆ' ಎಂದು ಈ ಕಾದಂಬರಿಯ ಮೂಲ ಲೇಖಕರಾದ
ಶ್ರೀ ಅಖಿಲನ್‌ರವರು ತಮ್ಮ ಅರಿಕೆಯಲ್ಲಿ ಹೇಳಿಕೊಂಡಿದ್ದಾರೆ.
ಶ್ರೀ ಅಖಿಲನ್‌ರವರು, ತಮ್ಮ ಅನೇಕ ಕತೆ ಕಾದಂಬರಿಗಳಿಂದ ತಮಿಳು
ಓದುಗರ ಹೃದಯಗಳನ್ನು ಸೂರೆಗೊಂಡಿದ್ದಾರೆ. 'ಗೆಳತಿ' (ತಮಿಳಿನಲ್ಲಿ
'ಸಿನೇಗಿದಿ') ಅಖಿಲನ್‌ರವರ ಭಾವಪೂರ್ಣ ಕಲಾಕೃತಿ. ಅವರು ಉತ್ತಮ
ಕತೆಗಾರರಾಗಿಯೂ, ಕಾದಂಬರಿಗಾರರಾಗಿಯೂ, ತಮಿಳು ಸಾಹಿತ್ಯ
ಪ್ರಪಂಚದಲ್ಲಿ ತಮ್ಮದೇ ಆದ ವಿಶಿಷ್ಟ ಸ್ಥಾನವನ್ನು ಗಳಿಸಿಕೊಂಡಿದ್ದಾರೆ.

ಸ್ವತಃ ಉತ್ತಮ ಕಾದಂಬರಿಗಾರರೂ, ಜ್ಞಾನಿಗಳೂ, ತತ್ವವೇತ್ತರೂ
ಆದ ಡಾಕ್ಟರ್ ಮು. ವರದರಾಜನ್, ಎಂ.ಎ.,ಎಂ.ಓ.ಎಲ್.,ಪಿ.ಹೆಚ್.ಡಿ.,
ಅವರು 'ಗೆಳತಿ'ಯ ಬಗ್ಗೆ ಮೆಚ್ಚುಗೆ ವ್ಯಕ್ತಪಡಿಸಿ ಹರಿಸಿದ್ದಾರೆಂದಮೇಲೆ
ಈ ಕಾದಂಬರಿಯ ಬಗ್ಗೆ ಹೆಚ್ಚು ನುಡಿಯುವುದು ಅನವಶ್ಯಕ.

ಈ ಕಾದಂಬರಿಯನ್ನು ಕನ್ನಡಕ್ಕೆ ಭಾಷಾಂತರಿಸಲು ಅಪ್ಪಣೆ
ಬೇಡಿದಾಗ, ಅದಕ್ಕೆ ಸಂತೋಷದಿಂದ ಒಪ್ಪಿಗೆಯನ್ನಿತ್ತುದೇ ಅಲ್ಲದೆ
ಕಾದಂಬರಿಯ ಅಂತ್ಯದಲ್ಲಿ ಒಂದು ಸಣ್ಣ ತಿದ್ದುಪಡಿಯನ್ನು ಸೂಚಿಸಿ,
ಅದನ್ನು ಬರೆದು ಕಳುಹಿಸಿ ಉಪಕರಿಸಿದ್ದಾರೆ ಶ್ರೀ ಅಖಿಲನ್‌ರವರು.

ಸೋಮು, ಲಲಿತಳನ್ನು ಜೊತೆಗೂಡಿಸಿ ನಾರಾಯಣಸ್ವಾಮಿಯವರು ವಿಮಾನದಲ್ಲಿ ಬರ್ಮಾಗೆ ಹೋಗುತ್ತಾರೆ. ಸೋಮು ಲಲಿತ ಇಬ್ಬರೇ ನಿಲ್ದಾಣದಲ್ಲಿ ನಿಲ್ಲುತ್ತಾರೆ. ಇಲ್ಲಿಗೆ ಮುಗಿಯುವ ಕತೆಯನ್ನು ಮುಂದುವರೆಸಿ, ಸೋಮು ಲಲಿತರನ್ನು ಮನೆಗೆ ಕರೆದುತಂದು, ನಾರಾಯಣಸ್ವಾಮಿಯವರ ಭಾವಚಿತ್ರದ ಮುಂದೆ ನಿಲ್ಲಿಸಿ ಕತೆಯನ್ನು ಮುಗಿಸುತ್ತಾರೆ ಶ್ರೀ ಅಖಿಲನ್ ರವರು. ಬೇಗನೆ ಪುನರ್ಮುದ್ರಣ ಕಾಣಲಿರುವ 'ಗೆಳತಿ'ಯ ಮೂಲಕೃತಿ 'ಸಿನೇಗಿದಿ'ಯಲ್ಲೂ ಈ ತಿದ್ದುಪಡಿಯಿರುತ್ತದೆಂದು ತಿಳಿಸಿದ್ದಾರೆ. ಅನುವಾದಿಸಲು ಒಪ್ಪಿ, ತಿದ್ದುಪಡಿಯನ್ನು ಸೂಚಿಸಿ, ಸಹಕರಿಸಿದ ಶ್ರೀ ಅಖಿಲನ್‌ರವರಿಗೆ ನಾನು ಕೃತಜ್ಞ. 'ಗೆಳತಿ'ಯ ಪ್ರಕಟನ ಕಾರ್ಯದಲ್ಲಿ ನೆರವಾದ ಮಿತ್ರರೆಲ್ಲರಿಗೂ ನಾನು ಋಣಿ.

೨–೧೨–೫೪
ಅರುಣೋದಯ ಲೈಬ್ರರಿ
ಬೆಂಗಳೂರು–೨.

ಎಂ. ರಾಮನ್.

ಪ್ರೀತಿಸಬಲ್ಲ,

ಪ್ರೇಮಿಸಬಲ್ಲ,

ಕನ್ನಡ

ಬಾಂಧವರಿಗೆ

Love begets desire; and that (desire) begets the immeasurable excellence of friendship.

THIRUKKURAL.
Ch. 8 (iv)

# ೧

ಬೆಳಗಿನ ಜಾವವೇ ನಾನು ಯಾವಾಗಲೂ ಕತೆ ಬರೆಯಲು ತೊಡಗುವ ವೇಳೆ. ಅಂದು ಪತ್ರಿಕಾಲಯದ ನನ್ನ ಕೊಠಡಿಯಲ್ಲಿ ಕುಳಿತು ಬೆಳಗ್ಗೆ ಐದು ಗಂಟೆಯಿಂದಲೇ 'ತಾವರೆ'ಯ ಮುಂದಿನ ಸಂಚಿಕೆಗೆಂದು ಕತೆ ಬರೆಯುತ್ತಿದ್ದೆ. ಕತೆ ಅರ್ಧಕ್ಕಿಂತಲೂ ಹೆಚ್ಚು ಮುಗಿದಿತ್ತು. ಬರವಣಿಗೆಯ ಓಟದಲ್ಲಿ ತಡೆಯಿಲ್ಲದ್ದರಿಂದ ಒಂಭತ್ತು ಗಂಟೆಯೊಳಗೆಲ್ಲಾ ಕತೆಯನ್ನು ಮುಗಿಸಿಬಿಡಬಹುದೆಂದುಕೊಂಡಿದ್ದೆ. ಹತ್ತು ಹನ್ನೊಂದು ಗಂಟೆಯ ನಂತರ ಪತ್ರಿಕಾಲಯದ ಕೆಲಸ ಪ್ರಾರಂಭವಾಗಿಬಿಡುತ್ತಿತ್ತು. ಅಂಚೆಯಲ್ಲಿ ಬರುವ ಕಾಗದಗಳನ್ನೆಲ್ಲಾ ನೋಡುವುದು, ಕತೆಗಳನ್ನು ಓದಿ ಆರಿಸುವುದು, ಭೇಟಿಗಾಗಿ ಬರುವವರೊಂದಿಗೆ ಮಾತನಾಡಿಕೊಂಡಿರುವುದು, ಇವೇ ಮುಖ್ಯ ಕೆಲಸಗಳು. ಇದರ ಮಧ್ಯೆ ಅಚ್ಚಿನ ಕರಡನ್ನು ತಿದ್ದುವುದು, ಚಿತ್ರಗಾರರಿಗೆ ಸೂಚನೆಗಳನ್ನು ಕೊಡುವುದು ಮುಂತಾದ ಕೆಲಸಗಳನ್ನೂ ನಾನು ಮಾಡಬೇಕಾಗಿತ್ತು.

ಹಾಸಿಗೆಯಿಂದೆದ್ದೊಡನೆಯೇ ಮೊದಲ ಬಾರಿ ಕಾಫಿಯಾಯಿತು. ಎರಡನೆಯ ಬಾರಿ ಕಾಫಿ ತರಲು ಜಾನಕಿರಾಮ ಪಕ್ಕದ ಹೋಟಲಿಗೆ ಹೋಗಿದ್ದ. ನಮ್ಮಿಬ್ಬರಿಗೆ ಪತ್ರಿಕಾಲಯವೇ ಆಫೀಸೂ ಮನೆಯೂ ಆಗಿತ್ತು. ನಾನು 'ತಾವರೆ' ಪತ್ರಿಕೆಯ ಸಂಪಾದಕ. ಅವನು ಆಫೀಸ್ ಹುಡುಗ. ಅವನು ಕೆಲಸಕ್ಕೆ ಸೇರಿ ಹೆಚ್ಚು ದಿನಗಳೇನೂ ಆಗಿರಲಿಲ್ಲ. ಇದ್ದಕ್ಕಿದ್ದಂತೆಯೆ ಬಾಗಿಲನ್ನು ತಟ್ಟಿದ ಶಬ್ದವಾಯಿತು. ಒಮ್ಮಿಂದೊಮ್ಮೆ ಜಾನಕಿರಾಮನಿಗೆ ಇಂಥಾ ಒಳ್ಳೆಯ ಅಭ್ಯಾಸ ಬಂದದ್ದನ್ನು ಕಂಡು ನನಗೆ ಆಶ್ಚರ್ಯವಾಯಿತು

ನನ್ನ ಗಮನವೆಲ್ಲಾ ಕತೆಯ ಮೇಲಿದ್ದುದರಿಂದ ಕೂಡಲೇ ಅ
ವಂತೆ ಹೇಳಲಿಲ್ಲ.

ಬಾಗಿಲ ಬಡಿತ ಇಮ್ಮಡಿಸಿತು.

"ಬಾ ಜಾನಕಿ!—ಬಾ!" ನಾನು ಕೂಗಿ ಹೇ
ನಿಂತಿತು; ಆದರೆ ಹುಡುಗ ಬರಲಿಲ್ಲ.

"ಏನು ಜಾನಕಿ ಇದು? ಈ ಆಂಗ್ಲರ ಪದ್ಧತಿ ನಮ
ಒಳಗೆ!"

ಹುಡುಗ ಬರಲಿಲ್ಲ. ಬದಲು ಒಂದು ಹುಡುಗಿಯ
ಕೇಳಿಸಿತು.

"'ಜಾನಕಿ'ಯೊ?....ಹುಂ! ಸರಿಹೋಯ್ತು."

ನಾನು ಬೆಚ್ಚಿಬಿದ್ದೆ. ಗದ್ಗದಿತ ಕೊರಲಧ್ವನಿಯನ್ನು ಕೇ
ತಡವರಿಸಿದೆ.

"ಯಾರದು?"

"ನಾನು ಬಂದು...."

"ಯಾರು?"

"ನಿಮ್ಮ ಜಾನಕಿಯಲ್ಲ; ಬೇರೊಬ್ಬಳು!" 'ನಿಮ್ಮ' ಎ
ಅವಳು ಒತ್ತಿ ಹೇಳಿದಳು. ಈಗ ಕೊರಲಿನ ಒಡತಿ ಯ
ಅರಿತುಕೊಂಡೆ.

"ನೀವೋ? ಬನ್ನಿ" ಎಂದೆ.

"ನಾನು ಬರಬಹುದೇ? ನಿಮಗೇನೂ...." ಮಾತ
ದೆಯೇ ಬಾಗಿಲನ್ನು ನೂಕಿ ಒಳಬಂದಳು. ಅವಳ ಕಣ್ಣುಗ
ಮೂಡಿದ್ದ ಸಂಶಯವನ್ನು ಮರೆಮಾಚಲು ಅವಳಿಗೆ
ಹೋಯಿತು. "ನೀವು ಬಂದದ್ದರಿಂದ ಯಾವ ತೊಂದರೆಯ
ಬರೆಯುತ್ತಿದ್ದೇನೆಂಬ ಯೋಚನೆಯೇ?" ಎಂದು ಕೇಳಿದೆ.

"ಕತೆ ಬರೆಯಲು ಅಡ್ಡಿಯೆಂದಾದರೆ ಪರವಾಯಿಲ್ಲ.

"ಆದರೆ?"

"ಬೇರೆ ಯಾರನ್ನೋ ಇದಿರುನೋಡುತ್ತಿರುವಾಗ ನಾನು ಬಂದು ನಿಂತಿದ್ದೇನೆ ಎಂಬುದೇ ! ನಾನು ಆಮೇಲೆ ಬರಲೇ ?" ಎಂದಳು.

ಅವಳ ಭಾವನೆಗಳೊಡನೆ ಒಂದಿಷ್ಟು ಆಟವಾಡಬೇಕೆಂದು ಬಯಸಿ,

"ಓ ! ಜಾನಕಿಯನ್ನು ಕುರಿತು ಹೇಳುತ್ತಿದ್ದೀರೇನು ? ಇನ್ನೇನು ಬರುವ ವೇಳೆ" ಎಂದು ಹೇಳಿದೆ.

"ಯಾರದು ಜಾನಕಿ ?....ಹುಂ ! ನಾ ನೇ ಕೆ ಇದನ್ನೆಲ್ಲಾ ಕೇಳ ಬೇಕು ? ಎಷ್ಟೋ ಪ್ರೇಯಸಿಯರು ನಿಮಗೆ" ಎಂದಳು. ನಾನು ತುಸು ನಕ್ಕು ಅವಳ ಮುಖವನ್ನು ತೀಕ್ಷ್ಣವಾಗಿ ನೋಡಿದೆ. ಅದು ಬಿಳಚಿ ಕೊಂಡಿತ್ತು. ತನ್ನ ಹೃದಯಾಂತರ್ಭಾವಗಳನ್ನು ಮರೆಸಲು ಅರಿಯದ ಚೆಲುವೆ ಅವಳು.

ನನ್ನ ನಗೆಯು ಅವಳಿಗೆ ಹೆಚ್ಚಿನ ಹಿಂಸೆಯನ್ನು ಕೊಟ್ಟಿರಬೇಕು.

"ಸರಿ, ನಾನು ಬರಲೇ ? ಮತ್ತೆ ಬರ್ತೇನೆ" ಎಂದು ಹೇಳಿಕೊಂಡೇ, ಪ್ರತ್ಯುತ್ತರಕ್ಕೂ ಕಾಯದೆ ಸರ್ರೆಂದು ಹೊರಟಳು. ಬಾಗಿಲನ್ನು ಪಟಾರೆಂದು ಅವಳು ಹೊರಗೆ ನೂಕಿದಾಗ ನೆಲದ ಮೇಲೆ ಕಾಫಿ ಟಮ್ಲರ್ ಉರುಳುವ ಸದ್ದು ಕೇಳಿಸಿತು. ಮೆಲ್ಲಗೆದ್ದು ಹಿಂದೆ ಹೋಗಿ ನೋಡಿದೆ. ಜಾನಕಿ ಏನೂ ತೋಚದೆ ಕಣ್ಣುಬಿಟ್ಟು ನಿಂತಿದ್ದ. ಕೆಳಗೆ ಚೆಲ್ಲಿದ ಕಾಫಿಯು ನೆಲದಲ್ಲಿ ಹರಡಿಕೊಂಡಿತ್ತು.

"ಪರವಾಯಿಲ್ಲ ಜಾನಕಿ, ಎರಡು ಕಾಫಿ ತಗೊಂಡು ಬಾ ಹೋಗು" ಎಂದೆ.

ಅವನು ಓಟಕಿತ್ತ.

ಬಿಳಚಿಕೊಂಡಿದ್ದ ಕಾಂತಳ ಮುಖವು ಈಗ ತಟ್ಟನೆ ಕೆಂಪಗಾಯ್ತು— ಲಜ್ಜೆಯಿಂದಲೋ ಸಂತೋಷದಿಂದಲೋ ಎಂಬುದು ತಿಳಿಯಲಿಲ್ಲ.

"ಜಾನಕಿ ಯಾರೆಂಬುದು ತಿಳಿಯಿತೇ ಕಾಂತಾ ?—ಆ ಫೀ ಸ್ ..." ಹುಡುಗ !" ಎಂದೆ.

"ಈ ಸಾಹಿತಿಗಳೇ ಹೀಗೆ; ಬಹಳ ಕೆಟ್ಟವರು."

"ಈ ಹುಡುಗಿಯರೇ ಹೀಗೆ; ಬಹಳ ಸಂಶಯ ಪ್ರಾಣಿಗಳು"—

ಎಷ್ಟು ರಭಸದಿಂದ ಕೊಠಡಿಯನ್ನು ಬಿಟ್ಟು ಹೊರಟಳೋ ಅದೇ

ವೇಗದಲ್ಲಿ ಹಿಂದಿರುಗಿ ಬಂದು ಎದುರಿನಲ್ಲಿದ್ದ ಕುರ್ಚಿಯಲ್ಲಿ ಗಂಭೀರವಾಗಿ ಕುಳಿತಳು. ಅರ್ಧದಲ್ಲೆ ನಿಂತ ಕತೆ ನಮ್ಮಿಬ್ಬರ ಮಧ್ಯೆ ಮೇಜಿನ ಮೇಲೆ ಬಿದ್ದಿತ್ತು.

"ಸಾರ್, ಏನು ಕತೆ ಬರೆಯುತ್ತಿದ್ದೀರಿ? ಕತೆಯ ಹೆಸರೇನು?" ಎಂದು ಕೇಳಿದಳು.

"ಇದೊಂದು ಪ್ರೇಮ ಕತೆ;—'ಒಂಟಿ ಗುಲಾಬಿ.'"

"ನನಗೆ ಗುಲಾಬಿ ಹೂವೆಂದರೆ ಪ್ರಾಣ. ಅದರಲ್ಲೂ ಒಂಟಿ ಗುಲಾಬಿಯನ್ನು ಒಂದೇ ಒಂದು ಎಲೆಯೊಂದಿಗೆ ತಲೆಯಲ್ಲಿ ಮುಡಿದರೆ ಎಷ್ಟು ಸೊಗಸಾಗಿರುತ್ತದೆ!" ಎಂದಳು.

ನಾನು ಸುಮ್ಮನಿದ್ದೆ.

"ನೀವು ಬರೆಯುವುದೆಲ್ಲವೂ ನನಗೆ ಹಿಡಿಸುತ್ತದೆ.—ನನಗೆ ಮಾತ್ರವೇನು? ತುಂಬಾ ಜನಕ್ಕೆ ಹಿಡಿಸುತ್ತದೆ."

"ಹಿಡಿಸಬೇಕಂದಲ್ಲವೇ ನಾನೂ ಬರೆಯುತ್ತಿರುವುದು?"

"ಹಾಗಂದರೆ...."

"ಸುಂದರ ಕಲೆಯನ್ನು ನಿರ್ಮಿಸುವವರೆಲ್ಲರೂ, ಇತರರನ್ನು ಸಂತೋಷಗೊಳಿಸುವುದಕ್ಕೇ ಬಯಸುತ್ತಾರೆ. ಹೂ ಕಟ್ಟುವವನು ತನ್ನ ಹೂಮಾಲೆಯನ್ನು ಎಷ್ಟು ಜಾಗರೂಕನಾಗಿ ಜಾಣ್ಮೆಯಿಂದ ಕಟ್ಟುತ್ತಾನೆ? ಬಳೆ ಮಾಡುವವನು ಹೇಗೆ ವಿವಿಧ ಬಣ್ಣಗಳನ್ನು ಆ ಒಡೆದುಹೋಗುವ ಗಾಜಿನೊಳಗೆ ಎರಕಹೊಯ್ಯುತ್ತಾನೆ? ಪ್ರಪಂಚದಲ್ಲಿ ಎಲ್ಲ ಬಗೆಯ ಸೌಂದರ್ಯಗಳನ್ನು ಸುರಿದು ರಾಶಿಹಾಕಿದ್ದಾನೆ ಸರ್ವಶ್ರೇಷ್ಠ ಕಲಾವಿದನಾದ ದೇವರು. ಇಷ್ಟೆಲ್ಲವೂ ಯಾರಿಗಾಗಿ? ಅನುಭವಿಸಲು ಬಲ್ಲ ರಸಿಕರಿಗಾಗಿಯಲ್ಲವೇ?"

"ನಮ್ಮ ಕಾಲೇಜಿನಲ್ಲಿ ಒಬ್ಬಳಿದ್ದಳು. ಅವಳಿಗೆ ನಿಮ್ಮ ಕತೆಗಳು ಸ್ವಲ್ಪವೂ ಹಿಡಿಸುವುದಿಲ್ಲ."

"ಒಬ್ಬಳೇನು? ಅನೇಕರಿರಬಹುದು...."

"ಅವಳು ಇಂಟರಿಗೇ ಓದನ್ನು ನಿಲ್ಲಿಸಿಬಿಟ್ಟಳು. ನನಗೂ ಅವಳಿಗೂ ನಿಮ್ಮ ಕತೆಗಳನ್ನು ಕುರಿತೇ ಆಗಾಗ್ಗೆ ಜಗಳವಾಗುತ್ತಿತ್ತು."

"ಸೌಂದರ್ಯವನ್ನು ಅನುಭವಿಸುವ ಸ್ಥಿತಿಯಲ್ಲಿಲ್ಲದವರು, ಅನುಭವಿಸುವ

ಸ್ಥಿತಿಯಲ್ಲಿದ್ದರೂ ಅನುಭವಿಸುವ ಅಪೇಕ್ಷೆಯಿಲ್ಲದವರೂ, ಇವರಿಗಾಗಿ ನಾನು ಬರೆಯುತ್ತಿಲ್ಲ. ಸಮಾಜದ ರೋಗರುಜಿನಗಳನ್ನು ಹೋಗಲಾಡಿಸುವ ವೈದ್ಯನಲ್ಲ ನಾನು. ರೋಗನಿವಾರಣೆ ಮಾಡುವ ವೈದ್ಯರು ಬೇರೆ; ವೇದನೆಯನ್ನು ಇಳಿಸಲು ಪ್ರೀತಿಪೂರ್ವಕವಾಗಿ ಪ್ರಯತ್ನಿಸುವ ಕಲಾವಿದರು ಬೇರೆ" ಎಂದೆ.

"ಆ ಹುಡುಗಿಯ ಹೆಸರು ಲಲಿತ. ಯಾವಾಗಲೂ ಉನ್ನತ ಧ್ಯೇಯಗಳನ್ನು ಕುರಿತು ಮಾತನಾಡುತ್ತಿರುತ್ತಾಳೆ. ದೇವತೆಗಳು ನೆಲದ ಮೇಲೆ ಕಾಲು ಬೀಳದಂತೆ ನಡೆಯುತ್ತಾರಂತೆ. ಹಾಗೆ ಪ್ರಪಂಚದಲ್ಲಿ ಸಲ್ಲದ ವಿಷಯಗಳ ಬಗ್ಗೆ ಅವಳಿಗೆ ಹೆಚ್ಚಿನ ಅಭಿಮಾನ. 'ಸಮಾಜದಲ್ಲಿ ಎಷ್ಟೋ ಕುಂದು ಕೊರತೆಗಳು ತುಂಬಿರುವಾಗ ಇವರೇಕೆ ಪ್ರೇಮದ ಬಗ್ಗೆಯೇ ಪದೇ ಪದೇ ಬರೆಯುತ್ತಾರೆ?' ಎನ್ನುತ್ತಾಳೆ" ಎಂದಳು.

"ಅವಳು ಹೇಳುವುದೂ ಒಂದು ರೀತಿಯಲ್ಲಿ ಸರಿಯಾಗಿದೆ. ಮುಂದೆ ಎಲ್ಲಾ ವಿಷಯಗಳ ಬಗ್ಗೆ ಬರೆಯಬೇಕೆಂದಿದ್ದೇನೆ."

"ಅವಳು ಹೇಳುವುದನ್ನು ನೀವು ಒಪ್ಪಿಕೊಳ್ಳುವುದೇ?" ಎಂದಳು ಅಸಮಾಧಾನದ ಧ್ವನಿಯಲ್ಲಿ. ಕಾಂತಳ ಮುಖವು ಕಾಂತಿಹೀನವಾಯಿತು. ಕಾಂತಳ ವಿಚಿತ್ರ ಸ್ವಭಾವವನ್ನರಿತ ನಾನು ಮೌನವಾಗಿದ್ದೆ.

"ನಾನು ನಿಮ್ಮ ಬಳಿ ಒಂದು ಸಹಾಯ ಕೋರಿ ಬಂದಿದ್ದೇನೆ" ಎಂದಳು ಇದ್ದಕ್ಕಿದ್ದ ಹಾಗೇ.

"ಎಂಥಾ ಸಹಾಯ?"

"ಖಂಡಿತ ಮಾಡಬೇಕು."

"ಸಾಧ್ಯವಾದರೆ, ಮಾಡಬಹುದಾದಂಥ ಸಹಾಯವಾದರೆ ಖಂಡಿತ ಮಾಡುತ್ತೇನೆ."

"ನಮ್ಮ ಕಾಲೇಜಿನಲ್ಲಿ 'ಸಾಹಿತ್ಯ ಸಂಘ'ದ ಸಭೆ ಒಂದು ನಡೆಯುತ್ತದೆ. ಅದಕ್ಕೆ ನೀವು ಬರಬೇಕು."

"ಖಂಡಿತ ಬರ್ತೇನೆ.–ಕಾಫಿ ಕೊಡ್ತೀರೋ!"

ಅಷ್ಟರಲ್ಲಿ ಜಾನಕಿರಾಮು ತಂದ ಕಾಫಿಯನ್ನು ಅವಳಿಗೂ ಕೊಟ್ಟು, ನಾನೂ ಕುಡಿದೆ.

"ಕಾಫಿ ಕೊಡ್ತೇವೆ; ದೊಡ್ಡ ಹಾರ ಹಾಕ್ತೇವೆ; ತುಂಬ ಕೈ ತಟ್ತೇವೆ.—ನೀವು ಸಭೆಯಲ್ಲಿ ಮಾತನಾಡಬೇಕು !"

"ಅದು ಮಾತ್ರ ಆಗದು !"

"ಯಾಕೆ ?"

"ಮಾತಾಡಲು ಬರೋದಿಲ್ಲ."

"ನೀವು ಮಾತನಾಡಲೇಬೇಕು; ನಾನು ನಿಮ್ಮನ್ನು ಬಿಡುವುದಿಲ್ಲ."

"ಒಂದು ಹುಡುಗಿಯ ಇದಿರಿನಲ್ಲೇ ನನ್ನ ಗಂಟಲು ಒಣಗಿ ಹೋಗುತ್ತಿರುವಾಗ ಇನ್ನು ಆ ಹುಡುಗಿಯರ ಗುಂಪಿನೆದುರು ನಿಂತು ಮಾತನಾಡುವ ಧೈರ್ಯ ನನ್ನಲ್ಲಿಲ್ಲ ?" ಎಂದೆ. ಆದರೆ ಕಾಂತಾ ಹಟ ಹಿಡಿದಳು.

"ನಾಲ್ಕು ಮಾತುಗಳು ಹೇಳಿದರೆ ಸಾಕು. ನಿಮಗೆ ತಿಳಿಯದಿದ್ದರೆ ಮಾತನಾಡಬೇಕಾದ್ದನ್ನು ನಾನೇ ಬರೆದು ಕೊಡ್ತೇನೆ" ಎಂದಳು.

"ಅಧ್ಯಕ್ಷತೆ ವಹಿಸುವುದು ಯಾರು ?"

"ಕೆ. ಸಿ. ನಾರಾಯಣಸ್ವಾಮಿ."

ನಾರಾಯಣಸ್ವಾಮಿಯವರನ್ನು ಕುರಿತು ಒಂದಿಷ್ಟು ಕೇಳಿದ್ದೆ. ಸಿರಿಸಂಪದೆಯ ಮಡಲಿನಲ್ಲಿ ಬೆಳೆದವರು. ಪದವಿ, ಬಿರುದಾವಳಿಗಳನ್ನು ಪಡೆದವರು. ಊರಿನ ಗಣ್ಯ ವ್ಯಕ್ತಿ. ಧರ್ಮಚಿಂತೆಯುಳ್ಳವರು. ವೃದ್ಧರಾದುದರಿಂದ ಸಾರ್ವಜನಿಕ ಜೀವನದಿಂದ ದೂರವಾಗಿ ಈಗ ನೆಮ್ಮದಿಯಾಗಿ ಬಾಳುತ್ತಿದ್ದಾರೆ.

"ಅವರನ್ನು ಏತಕ್ಕಾಗಿ ಕರೆದಿರಿ ?" ಎಂದೆ.

"ಅವರು ಹಣವಂತರು ! ಮನೆಯಲ್ಲಿ ಒಂದು ದೊಡ್ಡ ಪುಸ್ತಕ ಭಂಡಾರವನ್ನಿಟ್ಟದ್ದಾರೆ. ಸಭೆಗೆ ಅಧ್ಯಕ್ಷತೆ ವಹಿಸಲು ಕೇಳಿಕೊಂಡು, ಮಾರನೆಯ ದಿನ ಮನೆಗೆ ಹೋಗಿ ಅವರನ್ನು ಕಂಡರೆ ನಮಗೆ ಬೇಕಾದಷ್ಟು ಪುಸ್ತಕಗಳು ಸಿಗುತ್ತವೆ."

"ಮತ್ತೆ ನನ್ಯಾಕೆ ಕರೀತಿದ್ದೀರಿ ? ನಾನು ಹಣವಂತನೂ ಅಲ್ಲ, ರಾಜಕಾರಣಿಯೂ ಅಲ್ಲವಲ್ಲ !"

"ಆದರೆ ನೀವು ಸಾಹಿತಿಗಳು. ಆದ್ದರಿಂದ."

"ಹಾಗಂದರೆ ?"

“ ನಿಮ್ಮನ್ನು ಕೀಟಲೆ ಮಾಡಲು—ಬರವಣಿಗೆಯನ್ನು ಕಂಡವರು ಬರೆದವರನ್ನು ಕಾಣಲು ಬಯಸುವುದರಲ್ಲಿ ತಪ್ಪೇನು ?” ಎಂದು ಅವಳು ನಕ್ಕಳು.

ಮೃಗಶಾಲೆಗೆ ಪ್ರದರ್ಶನಕ್ಕೆಂದು ಬಂದಿರುವ ಹೊಸ ಪ್ರಾಣಿಯನ್ನು ನೋಡುವಂತೆ, ಅಲಂಕಾರಕ್ಕೆಂದು ಇಟ್ಟ ಹೊಸ ಗೊಂಬೆಯನ್ನು ನೋಡುವಂತೆ ಅವರು ನನ್ನನ್ನು ನೋಡುವುದು ನನಗೆ ಬೇಕಾಗಿರಲಿಲ್ಲ. ಆದರೂ ಕಾಂತಳನ್ನು ಕೆರಳಿಸಿ ಮುಖವನ್ನು ಕೋಪದಿಂದ ಕೆಂಪಡರಿಸಲು ನಾನು ಹಿಂದು ಮುಂದು ನೋಡಬೇಕಾಯಿತು. ಅವಳು ಹುಡುಗಿ—ಕಾಲೇಜ್ ಹುಡುಗಿ, ಅದರಲ್ಲೂ ನನ್ನ ಮಾಲಿಕರ ಮಗಳು.

ನಾನು ಒಪ್ಪಿಕೊಳ್ಳದೆ ಬೇರೆ ದಾರಿಯಿರಲಿಲ್ಲ. ಒಪ್ಪಿಕೊಂಡೆ.

“ ಇನ್ನೂ ಒಂದೇ ಒಂದು....” ಎಂದು ರಾಗ ಎಳೆದಳು.

“ ಸಹಾಯವೇ ? ವಿನಂತಿಯೇ ? ಉಪದೇಶವೇ ? ಕಟ್ಟಳೆಯೇ ? ಅಪ್ಪಣೆಯಾಗಬೇಕು.”

“ ಹೌದು ಆಜ್ಞೆ; ಕಟ್ಟಾಜ್ಞೆ !”

“ ಎಷ್ಟಾದರೂ ಮಾಲಿಕರ ಮಗಳಲ್ಲವೇ ? ನಿಮ್ಮ ಮನೆಯ ಬೆಕ್ಕಿನ ಮರಿಗೂ ಆಜ್ಞೆಯಿಡುವ ಅಧಿಕಾರವಿದೆ.”

“ ಬೇಡ ! ನಾನು ಏನೂ ಹೇಳುವುದಿಲ್ಲ” ಎಂದವಳೇ ಮುಖವನ್ನು ಸೊಟ್ಟಗೆ ಮಾಡಿಕೊಂಡು ಎದ್ದಳು.

“ ಕೂತುಕೊಳ್ಳಿ ಕಾಂತಾ ! ಆಮೇಲೆ ನಿಮ್ಮ ಆಜ್ಞೆಯನ್ನು ತಿಳಿಯಲು ನಾನು ನಿಮ್ಮ ಮನೆಗೇ ಬರಬೇಕಾದೀತು !”

“ ನನ್ನನ್ನು ‘ ನೀವು, ತಾವು ’ ಎಂದೆಲ್ಲಾ ಕರೆಯಬಾರದು. ಖಂಡಿತ ಹಾಗೆಲ್ಲಾ ಕರೆಯಬಾರದು.”

“ ಇನ್ನು ಹೇಗಮ್ಮ ಕರೆಯೋದು ?”

“ ನಾನೇನು ನಿಮಗೆ ‘ ಅಮ್ಮ ’ ಅಲ್ಲ !”

“ ಸರಿ ‘ ನೀನು ’ ಎಂದು ಕರೆಯಲೇ ? ಹಾಗಾದರೆ ನೀನೂ ನನ್ನನ್ನು ‘ ಸಾರ್ ’ ಎಂದು ಕರೆಯಕೂಡದು.”

“ ‘ ಅಯ್ಯಾ ಪ್ರಿಯ ಸಾಹಿತಿಗಳೇ ’ ಎಂದು ಹೇಳಲೇನು.”

"ನಾನೂ ನಿನ್ನನ್ನು 'ಅಮ್ಮಾ, ಕಾಂತಾಮಣಿದೇವಿಯವರೇ' ಎಂದು ಕರೆದರೆ...."

"ಮತ್ತೆ ನಿಮ್ಮನ್ನು ಹೇಗೆ ಕರೆಯುವುದಂತೆ?"

"'ಅಣ್ಣಾ' ಎಂದು ಸುಲಭವಾಗಿ ಕರೆಯಬಹುದಲ್ಲ" ಎಂದೆ.

ಈ ಅನಿರೀಕ್ಷಿತ ಉತ್ತರದಿಂದ ಅವಳು ಪೆಚ್ಚಾದುದನ್ನು ಕಂಡೆ. ಅದನ್ನು ಮರೆಸುವವಳಂತೆ ನಗುತ್ತಾ ಹೇಳಿದಳು.

"ಉತ್ತರದೇಶದ ಕತೆಗಳಲ್ಲಿ ಬರುವ ಹುಡುಗಿಯರು ಗಂಡಸರನ್ನು ಮೊದಲು ಹೀಗೇ ಕರೆಯುತ್ತಾರೆ."

"ದಕ್ಷಿಣದಲ್ಲೂ ಇಂಥಾ ಒಳ್ಳೆಯ ಅಭ್ಯಾಸ ಇದ್ದರೇನು?"

"ಆದರೆ ಇಂದು 'ಅಣ್ಣಾ' ಎಂದು ಕರೆದವರನ್ನೇ ಮುಂದಿನ ತಿಂಗಳು ಕೈ ಹಿಡಿದು ಅವರ ಮಡದಿಯರಾಗಿ ಮೆರೆಯುತ್ತಾರೆ" ಎಂದಳು.

ನಾನು ಮೌನದಲ್ಲಿ ಮುಳುಗಿದೆ.

ಅವಳು ನನ್ನನ್ನು ಒಂದು ಬಾರಿ ದಿಟ್ಟಿಸಿ ನೋಡಿ ತಲೆ ತಗ್ಗಿಸಿ ಬಿಟ್ಟಳು. ಅವಳ ಕೈಗಳು ಕತ್ತಿನಲ್ಲಿದ್ದ ಕಂಠೀಸರವನ್ನು ಹೊರಗೆಳೆದು, ಅದರ ಮಧ್ಯೆ ಇದ್ದ 'ಡಾಲರಿ'ನೊಡನೆ ಆಟವಾಡಿದವು. ಮರುಕ್ಷಣ ಆ ಸರವನ್ನು ರಭಸದಿಂದ ಹಿಂದಕ್ಕೆ ಎಸೆದಳು. ಈಗ ಅವಳ ಬೆರಳುಗಳ ತುಂಟಾಟಕ್ಕೆ ಅವಳು ಹೆಣೆದಿದ್ದ ಜಡೆಗಳಲ್ಲೊಂದು ಸಿಕ್ಕಿತ್ತು. ಸ್ವಲ್ಪ ಹೊತ್ತು ಮೌನವಾವರಿಸಿತ್ತು.

"ನಾನು ಹೋಗಿ ಬರಲೇ?"—ಅವಳ ಮಾತುಗಳು ನೀರಸವಾಗಿ ಹೊರಬಿದ್ದವು.

"ಸರಿ!"

"ಕತೆಗೆ ಅಡ್ಡಿಯಾಗಿ ಬಂದದ್ದಕ್ಕೆ ಕ್ಷಮಿಸಿ" ಎಂದು ಎದ್ದು ಹೊರಟಳು.

ಬಾಗಿಲ ಬಳಿ ನಿಂತು ಅವಳು ಕೈಜೋಡಿಸಿ ವಂದಿಸುತ್ತಾ ನನ್ನ ಮುಖದಲ್ಲಿ ಯಾವುದನ್ನೋ ಅರಸಿದಳು. ಹುಡುಕುತ್ತಿದ್ದುದು ಅಲ್ಲಿ ಕಾಣಲಿಲ್ಲವೇನೋ, ವೇಗವಾಗಿ ಹೊರಟುಹೋದಳು.

ನನ್ನ ಪತ್ರಿಕೆಯ ಮಾಲಿಕ ರಾಮಲಿಂಗಂರವರ ಮುದ್ದುಮಗಳೇ,

ಕಾಂತಾ. ವಯಸ್ಸಿಗೆ ಮೀರಿದ ಅಂಗಸೌಷ್ಠವ; ಆ ಬೆಳವಣಿಗೆಯಿಂದ ಪುಷ್ಟಿಗೊಂಡ ಚೆಲುವು; ಆ ಚೆಲುವಿಗೆ ತಕ್ಕ ನಿಲುವು; ಎಲ್ಲವೂ ಸೇರಿ ಅವಳು ನದೀತೀರದಲ್ಲಿ ಬೆಳೆಯುವ ತೆಂಗಿನ ಹಾಗೆ ಥಳಥಳನೆ ಹೊಳೆಯುತ್ತಿದ್ದಳು. ಅವಳ ವಿದ್ಯೆ, ಹಣ ಮತ್ತು ಸುತ್ತುಮುತ್ತಲಿನ ವಾತಾವರಣವು ಅವಳಿಗೆ ಅಲಂಕಾರ ಕಲೆಯ ಅದ್ಭುತಗಳನ್ನೂ ಹೇಳಿಕೊಟ್ಟಿದ್ದವು, ಕಣ್ಸೆಳೆಯುವಂತೆ ತನ್ನನ್ನು ಅಲಂಕರಿಸಿಕೊಳ್ಳಲು ಅವಳು ಒಂದು ದಿನವಾದರೂ ತಪ್ಪಿದ್ದಿಲ್ಲ.

ಅವಳಿಗಾಗಿ ನಿಟ್ಟುಸಿರೊಂದನ್ನು ಬಿಟ್ಟು, ಕತೆಯನ್ನು ಮುಂದುವರಿಸಿದೆ.

# ೨

ಐದು ನಿಮಿಷಗಳು ಮಾತನಾಡಲೊಪ್ಪಿಕೊಂಡ ಧರ್ಮಸಂಕಟಕ್ಕಾಗಿ ಐದು ಗಂಟೆಗಳ ಕಾಲ ಯೋಚಿಸಿದೆ; ಐದು ಪುಸ್ತಕಗಳನ್ನು ತಿರುವಿ ಹಾಕಿದೆ; ಐದು ಸಲ ಕಾಫಿ ಕುಡಿದು, ಐದು ಪುಟಗಳಷ್ಟು ಟಿಪ್ಪಣಿ ಮಾಡಿದೆ. ಸಂಜೆ ಐದು ಗಂಟೆಗೆ ಸಭೆ.

ಗುಂಪು ಹೆಚ್ಚಾಗಿಯೇ ಇತ್ತು. ಪುಷ್ಪ ಪ್ರದರ್ಶನಕ್ಕೆಂದು ಬಂದು ರಾಶಿ ಬೀಳುವ ಹಲವಾರು ಬಣ್ಣದ ಹೂಗೊಂಚಲುಗಳ ಹಾಗೆ, ಕಣ್ಸೆಳೆಯುವ ಬಣ್ಣಗಳ ಉಡುಪನ್ನು ಧರಿಸಿ ಬಂದಿದ್ದರು ಕಾಲೇಜ್ ವಿದ್ಯಾರ್ಥಿನಿಯರು. ಉದ್ಯಾನವನದ ಪರಿಮಳ ಅಲ್ಲಿ ಬೀಸುತ್ತಿತ್ತು. ಬೆಳಗಿನ ಜಾವದಲ್ಲಿ ಗಿಡಗಳ ಕುಡಿಯಲ್ಲಿ ತೂಗಾಡಿದ ಕುಸುಮಗಳು ಈಗ ಕಾಲೇಜ್ ಕೋಮಲೆಯರ ಕೇಶರಾಶಿಯನ್ನು ತಬ್ಬಿ ಬಾಡಿಹೋಗಿದ್ದುವು.

ಕಾಂತಳು ಆ ಸಭೆಯ ಕಾರ್ಯಕಲಾಪಗಳಲ್ಲಿ ಬಹಳ ಮುಖ್ಯ ಪಾತ್ರ ವಹಿಸಿದವಳಂತೆ ಅಲ್ಲಿಂದಿಲ್ಲಿಗೆ ಓಡಾಡುತ್ತಿದ್ದಳು. ಅವರಿವರ ಬಳಿ ಹೋಗಿ ವಿನಯದಿಂದ ಬಾಗಿ ಮಾತನಾಡುತ್ತಿದ್ದಳು; ಇದರ ಮಧ್ಯೆ ನನ್ನನ್ನೂ ನೋಡಿ ನಗುತ್ತಿದ್ದಳು.

ಒಂದು ಬಾರಿ ನನ್ನ ಹತ್ತಿರ ಬಂದು

"ಭಾಷಣ ಮಾಡುವಾಗ ನಿಮಗೇನು ಬೇಕು? ಕಾಫಿಯೇ? ಸೋಡಾನೇ? ಅಥವಾ ತಣ್ಣೀರು ಸಾಕೋ?" ಎಂದು ಕೇಳಿದಳು.

"ಸಣ್ಣಪುಟ್ಟ ಭಾಷಣ ಮಾಡುವವರಿಗೆ ನಿಮ್ಮ ಕಾಲೇಜಿನಲ್ಲಿ ಏನನ್ನು ಕೊಡುವ ಪದ್ಧತಿ."

"ಇಲ್ಲಿಗೆ ಬಂದೂ ಹುಡುಗಾಟವೇ!" ಎಂದಳು.

ಮರುಕ್ಷಣ ಕಾಂತಳ ಕೈಯಲ್ಲಿ ಒಂದು ತಟ್ಟೆಯ ತುಂಬ ಚಾಕಲೇಟ್ ಇತ್ತು. ಮೊದಲೇ ಅದನ್ನು ಹಂಚುತ್ತಿದ್ದ ವಿದ್ಯಾರ್ಥಿನಿಯ ಕೈಯಿಂದ ಅದನ್ನು ಕಿತ್ತು ತಾನೇ ಹಂಚತೊಡಗಿದಳು. ಚಾಕಲೇಟ್ ಹಿಡಿಸದ ನನಗೂ ಎರಡು ಚಾಕಲೇಟ್‌ಗಳು ಸಿಕ್ಕಿದವು. ತಾನು ಮೆಚ್ಚಿದ್ದನ್ನು ಇತರರ ತಲೆಗೂ ಕಟ್ಟುವುದು ಹೆಣ್ಣಿನ ಸ್ವಭಾವವಲ್ಲವೇ !

ಅಧ್ಯಕ್ಷತೆ ವಹಿಸಿದ ನಾರಾಯಣಸ್ವಾಮಿಗೆ ಅರವತ್ತು ವರ್ಷಕ್ಕೆ ಮೇಲಿರಬಹುದು. ಕೆಂಪಗಿದ್ದರು; ನಡುತರ ಗಾತ್ರದ ವ್ಯಕ್ತಿ. ಎತ್ತರವೂ ಅಷ್ಟೇ. ಚಿನ್ನದ ಫ್ರೇಂ ಹಾಕಿದ ಕನ್ನಡಕವನ್ನು ಧರಿಸಿ, ಶುಭ್ರ ಬಿಳಿಯ ವಸ್ತ್ರಧಾರಿಗಳಾಗಿ ಬಂದಿದ್ದರು. ಕೈಯಲ್ಲಿ 'ಭಾರತಿ'ಯವರ ಕವಿತೆಗಳೂ ಬೆಳ್ಳಿಯ ಹಿಡಿಯುಳ್ಳ ಬೆತ್ತವೂ ಇದ್ದುವು. ನಗುಮುಖದಿಂದ ನನ್ನ ಬಳಿ ಬಂದು ಯುವಕರಂತೆ ಉತ್ಸಾಹದಿಂದ ಮಾತನಾಡಿದರು. ಅರವತ್ತು ವರ್ಷ ದಾಟಿದ ಒಬ್ಬ ಹಿರಿಯರು ನನ್ನೊಡನೆ ಹೀಗೆ, ನಾನು ಮೆಚ್ಚುವಂತೆ ಮಧುರವಾಗಿ ಮಾತನಾಡಿದ್ದನ್ನು ಕಂಡು ನನಗೆ ಆಶ್ಚರ್ಯವಾಗಿತ್ತು.

ಹಿರಿಯರ ಸಹವಾಸದಲ್ಲಿ ಸಾಧಾರಣವಾಗಿ ನನಗೆ ಎರಡು ವಿಧವಾದ ಅನುಭವಗಳು ಉಂಟಾಗಿವೆ. ಕೆಲವರು ನನ್ನ ಕತೆಗಳಲ್ಲಿ ಒಂದನ್ನೂ ಓದಿರುವುದಿಲ್ಲ. ಅವರಿಗೆ ಸಾಹಿತ್ಯದಲ್ಲಿ ಆಸಕ್ತಿಯೂ ಅಷ್ಟಕ್ಕಷ್ಟೇ. ಆದರೂ ಎದುರಿಗೆ ಕಂಡಾಗ ಮಾತ್ರ ನನ್ನನ್ನು ವಿಶೇಷವಾಗಿ ಹೊಗಳುವ ಪದ್ಧತಿ ಇವರದು. ಇನ್ನು ಕೆಲವರೋ ನನ್ನ ಕತೆಗಳಲ್ಲಿ ಒಂದನ್ನೂ ಬಿಡದೆ ಓದಿರುತ್ತಾರೆ. ತಲೆದೂಗಿ ಮೆಚ್ಚಿರುತ್ತಾರೆ. ಆದರೆ ಎದುರಿಗೆ ನನ್ನನ್ನು ಕಂಡಾಗ ಮಾತ್ರ ಮೆಚ್ಚುಗೆ ಸೂಚಿಸುವ ಮನವೂ ಅವರಿಗಿರುವುದಿಲ್ಲ. ತಮ್ಮ ಅಂತಸ್ಥಿಗೂ, ವಯಸ್ಸಿಗೂ ಅದು ನಿಕೃಷ್ಟ ಕಾರ್ಯವೆಂಬುದು ಅವರ ಭಾವನೆ.

ಆದರೆ ಈ ನಾರಾಯಣಸ್ವಾಮಿಯವರೋ ಇದಕ್ಕೆ ಭಿನ್ನ ಸ್ವಭಾವದವರಾಗಿದ್ದರು. ಕತೆಗಳ ಹೆಸರುಗಳು, ಕಥಾಪಾತ್ರಗಳು, ಸನ್ನಿವೇಶಗಳು, ಇವೆಲ್ಲವುಗಳ ಬಗ್ಗೆಯೂ ಮಾತನಾಡಿ ತಮ್ಮ ಸ್ಪಷ್ಟವಾದ ಅಭಿಪ್ರಾಯವನ್ನು ಸ್ವಚ್ಛ ನುಡಿಗಳಲ್ಲಿ ಹೊರಗೆಡವಿದರು. ಒಬ್ಬ ಸಾಹಿತಿ ಹಿಗ್ಗಿ ಹೆಮ್ಮೆಪಡತಕ್ಕದ್ದು ಇಂಥಾ ಹಿರಿಯರ ಪ್ರಶಂಸಾ ವಾಕ್ಯಗಳನ್ನು ಕೇಳಿದಾಗಲೇ ಅಲ್ಲವೇ !

ಸಭೆ ಮೊದಲಾಯಿತು. ಮೊದಲೇ ಹಲವು ಬಾರಿ ಪಠನಮಾಡಿ ತಯಾರಿಸಿಟ್ಟ ನನ್ನ ಐದು ನಿಮಿಷಗಳ ಭಾಷಣವನ್ನು ಮುಗಿಸಿ ಕುಳಿತುಕೊಂಡೆ. ಮುಕ್ತಾಯ ಭಾಷಣವೆಂದು ನಾರಾಯಣಸ್ವಾಮಿ ಅರ್ಧ ಗಂಟೆ ಮಾತನಾಡಿದರು. ಅವರ ಧ್ವನಿ ಕಂಚಿನ ಹಾಗೆ ಮೊಳಗಿತು. ಅವರು ಅಲ್ಲಲ್ಲಿ ಉದಹರಿಸುತ್ತಿದ್ದ 'ಭಾರತಿ'ಯವರ ಕವಿತೆಯ ಸಾಲುಗಳು ಮುದವನ್ನು ನೀಡುತ್ತಿದ್ದವು. ಆ ಅರ್ಧ ಗಂಟೆಯ ಹೊತ್ತೂ ಹಚ್ಚ ಹಸುರು ವನದ ತಂಪು ನೆರಳಿನಲ್ಲಿ ಕುಳಿತಿದ್ದ ಹಾಗೆ ಇತ್ತು ನನಗೆ.

ವಂದನಾರ್ಪಣೆ ಸಲ್ಲಿಸಲು ಬಂದ ಹುಡುಗಿ ನಾನು ದೊಡ್ಡ ವಾಗ್ಮಿಯಾಗಿದ್ದೇನೆಂದು ಕತೆ ಕಟ್ಟಿದಳು. ನಾರಾಯಣಸ್ವಾಮಿಯನ್ನು ಕರ್ಣನ ತರುವಾಯ ಈ ದೇಶದಲ್ಲಿ ಕಾಣಿಸಿಕೊಂಡ ದಾನಶೂರರೆಂದು ಹೊಗಳಿದಳು. ಸಭೆ ಮುಗಿಯಿತು. ವಿದ್ಯಾರ್ಥಿನಿಯರು ಸಹಿ ಪಡೆಯಲು ಧಾವಿಸಿದರು. ಆ ಗುಂಪನ್ನು ಒಂದು ಬಗೆಯಾಗಿ ಮುಗಿಸಿಕೊಂಡು ನಾನೂ ನಾರಾಯಣಸ್ವಾಮಿಯೂ ಸ್ವಲ್ಪ ಹೊತ್ತು ಏಕಾಂತದಲ್ಲಿ ಕುಳಿತು ಮಾತನಾಡಿದೆವು.

"ನಿಮ್ಮ ಕತೆಗಳನ್ನು ನಮ್ಮ ಮನೆಯಾಕೆಯೂ ಓದಿ ಮೆಚ್ಚಿಕೊಳ್ಳುವುದುಂಟು. ಆದರೆ ಅವಳ ವಿಮರ್ಶೆಯೇ ಹೊಸ ತರಹೆಯದ್ದಾಗಿರುತ್ತದೆ. ಸ್ವಾರಸ್ಯವಾಗಿ ವೇಳೆಯನ್ನು ಕಳೆಯಲು ಕತೆಗಳೂ ಕವಿತೆಗಳೂ ತಕ್ಕ ಸಾಧನ ಅಲ್ಲವೇ ?" ಎಂದರು ನಾರಾಯಣಸ್ವಾಮಿ.

"ಕತೆಗಳಿಂದ ನಾನು ತುಂಬ ಗೆಳೆಯರನ್ನು ಪಡೆದಿದ್ದೇನೆ. ಆ ರಸಿಕ ಹೃದಯಿಗಳ ಸಂಪರ್ಕವೇ ನನಗೆ ಬರೆಯಲು ಉತ್ಸಾಹ ನೀಡಿ ಪ್ರೇರೇಪಿಸುತ್ತಿರುತ್ತದೆ."

"ನಿಮ್ಮನ್ನು ಸಂಧಿಸಿದರೆ ಅವಳೂ ಬಹಳ ಸಂತೋಷಪಡುತ್ತಾಳೆ."

"ಅವರೂ ಇಲ್ಲಿಗೆ ಬಂದಿರಬಹುದಲ್ಲ ?"

"ಬಂದಿರಬಹುದು."

ಒಂದು ಕ್ಷಣ ಅವರು ಯೋಚಿಸಿದರು. ನಾನೂ ಯೋಚಿಸಿದೆ. ನಮ್ಮ ದೇಶದಲ್ಲಿ ಕತೆ, ಕಾದಂಬರಿಗಳನ್ನೋದಲು ಗಂಡಸರಿಗಿಂತ ಹೆಂಗಸರಿಗೇ ಹೆಚ್ಚು [illegible] ಮತ್ತು ಇಚ್ಛೆಯಿರುವುದು. ನಾರಾಯಣಸ್ವಾಮಿಯವರ ಹೆಂಡತಿ ಮುದುಕಿಯಾದರೂ ಹೆಣ್ಣು ಜೀವಿ ತಾನೇ? ಈ ಮುದಿ ವಯಸ್ಸಿನಲ್ಲಿ

ಸಂಸಾರತಾಪತ್ರಯಗಳ ಮಧ್ಯೆ, ಆಕೆ ಕತೆಗಳನ್ನು ಓದಿ, ವಿಮರ್ಶಿಸುವ ಮಟ್ಟಿಗೆ ಸಾಹಿತ್ಯದಲ್ಲಿ ಆಸಕ್ತಿಗೊಂಡಿದ್ದಾರೆಂದರೆ ನಾನು ಸಹಜವಾಗಿ ಹೆಮ್ಮೆಪಡಬೇಕಲ್ಲವೇ ?

"ನಿಮಗೆ ಈಗ ಬೇರೆಲ್ಲೂ ಕೆಲಸವಿಲ್ಲ ತಾನೇ ? ಸಾಯಂಕಾಲದ ವೇಳೆಯಲ್ಲವೇ ? ನನ್ನೊಡನೆ ಮನೆಗೆ ಬಂದು ಹಿಂದಿರುಗಲು ನಿಮಗೆ ಅನುಕೂಲವಿರುವುದೇ ?" ಎಂದರು.

"ಇನ್ನೊಂದು ಸಲ ಬರುತ್ತೇನೆ."

"ಬಿಡುವಿದ್ದರೆ ಈಗಲೇ ಬನ್ನಿ. ಬೇಗ ಹಿಂದಿರುಗಿಬಿಡಬಹುದು. ಅಲ್ಲಿ ತೋಟದಲ್ಲಿ ತಂಗಾಳಿ ಹಿತಕರವಾಗಿರುತ್ತದೆ."

"ಸರಿ ಬರ್ತೇನೆ" ಎಂದು ಒಪ್ಪಿಕೊಂಡೆ. ತಿರುಗಿ ನೋಡಿದೆ. ಬಾಗಿಲ ಹತ್ತಿರ ಕಾಂತಳು ನನಗಾಗಿ ಕಾಯುತ್ತಿದ್ದಳು. ಎದ್ದು ಅವಳ ಬಳಿ ಹೋದೆ.

"ಬನ್ನಿ ಹೋಗೋಣ; ಕಾರು ಕಾದಿದೆ" ಎಂದಳು.

"ನಾರಾಯಣಸ್ವಾಮಿ ಅವರ ಮನೆಗೆ ಕರೆಯುತ್ತಾರೆ."

"ಇನ್ನೊಂದು ದಿನ ಅಲ್ಲಿಗೆ ಹೋಗಬಹುದು. ನಿಮಗಾಗೇ ಕಾದಿದ್ದೇನೆ. ಬೇಕಾದರೆ ಇಲ್ಲೇ ಮಾತನಾಡಿಬಿಟ್ಟು ಇನ್ನೂ ಸ್ವಲ್ಪ ಹೊತ್ತಿನಲ್ಲಿ ಬನ್ನಿ."

"ಇಲ್ಲ, ಅವರಲ್ಲಿಗೆ ಬರುವುದಾಗಿ ಒಪ್ಪಿಕೊಂಡುಬಿಟ್ಟೆ" ಎಂದೆ.

ಕಣ್ಣುಗಳನ್ನು ಕೋಪದಿಂದ ಉರುಳಿಸಿ, ನನ್ನನ್ನು ದಿಟ್ಟಿಸಿ ನೋಡಿಬಿಟ್ಟು ಕಾರಿನಲ್ಲಿ ಹೋಗಿ ಕುಳಿತಳು ಕಾಂತಾ. ಕಾರಿನ ಬಾಗಿಲು ಫಟಾರೆಂಬ ಶಬ್ದದೊಡನೆ ಮುಚ್ಚಿಕೊಂಡಿತು. ಕಾರು ಹೊರಟುಹೋಯಿತು.

ಇದನ್ನೆಲ್ಲಾ ನೋಡುತ್ತಿದ್ದ ನಾರಾಯಣಸ್ವಾಮಿ ಕೇಳಿದರು "ಯಾರು ಈ ಹುಡುಗಿ ?"

"ಪತ್ರಿಕಾಕರ್ತ ರಾಮಲಿಂಗಂರವರ ಮಗಳು."

"ಓಹೋ ! ಸರಿ" ಎಂದು ಎದ್ದರು.

ನಾರಾಯಣಸ್ವಾಮಿಯವರ ಮನೆಯ ಕಾಂಪೌಂಡ್ ಬಾಗಿಲನ್ನು ತೋಟದ ಮಾಲಿ ತೆಗೆದ. ಒಳ ಬಾಗಿಲನ್ನು ವಯಸ್ಸಾದ ಒಬ್ಬಾಕೆ ತೆಗೆದರು. ಆಕೆಗೆ ನಲವತ್ತು ವರ್ಷಕ್ಕೆ ಮೇಲಿರಬಹುದು. ಜರಿಯಂಚಿನ

ರೇಶ್ಮೆ ಸೀರೆಯುಟ್ಟು, ಹಣೆಯ ತುಂಬ ಕುಂಕುಮವಿಟ್ಟು, ತಲೆಯ ತುಂಬ ಹೂವು ಮುಡಿದಿದ್ದರು. ನಾನು ಅಲ್ಲಿ ಸ್ವಲ್ಪ ತಡವರಿಸಿದೆ. ನಾರಾಯಣ ಸ್ವಾಮಿ ಆಕೆಗೆ ನನ್ನನ್ನು ಪರಿಚಯ ಮಾಡಿಸುವರೆಂದು ಎದುರುನೋಡಿದ್ದೆ. ಆದರೆ ಅವರು ಬೇಗನೆ ಒಳಗೆ ಹೋದದ್ದರಿಂದ ನಾನೂ ಅವರನ್ನು ಹಿಂಬಾಲಿಸಬೇಕಾಯಿತು.

ತೋಟದಲ್ಲಿ ಮರಗಳೂ, ಗಿಡಬಳ್ಳಿಗಳೂ ದಟ್ಟವಾಗಿ ಬೆಳೆದಿದ್ದುವು. ಇಕ್ಕಡೆಗಳಲ್ಲೂ ಸಾಲಾಗಿ ಹೂಗಿಡಗಳು ಬೆಳೆದಿದ್ದುವು. ಅವುಗಳ ಆಚೆ ಬೆಂಡೆ, ಬದನೆ ಮುಂತಾದ ತರಕಾರಿಯ ಗಿಡಗಳು ಬೆಳೆದಿದ್ದುವು. ತೋಟದ ಮಧ್ಯೆ ಚಪ್ಪರದ ಛಾವಣಿ ಹಾಕಿದ ಒಂದು ದುಂಡಗಿನ ಸಿಮೆಂಟ್ ವೇದಿಕೆಯನ್ನು ಕಟ್ಟಿದ್ದರು. ಅದರ ಮೇಲೆ ದೊಡ್ಡ ಮೇಜೊಂದನ್ನು ಹಾಕಲಾಗಿತ್ತು. ಮೇಜಿನ ಸುತ್ತಲೂ ಕೆಲವು ಮೆತ್ತೆ ಹೊಲಿದ ಕುರ್ಚಿಗಳೂ ಇದ್ದವು. ಅಲ್ಲಿ ಒಂದು ಕಡೆಗೆ ಸುಮಾರು ಇಪ್ಪತ್ತು ವರ್ಷ ಪ್ರಾಯದ ಒಂದು ಹುಡುಗಿ ಕುಳಿತು ಅದೇ ತಾನೇ ಹೊರಬಂದಿದ್ದ 'ತಾವರೆ' ಪತ್ರಿಕೆಯನ್ನು ಓದುತ್ತಿದ್ದಳು.

"ಇವಳೇ ಲಲಿತ ! ನಾನು ನಿಮಗೆ ಹೇಳಲಿಲ್ಲವೇ; ಆ ಕತೆ ಹುಚ್ಚಿ. ಕತೆ, ಕಾದಂಬರಿಗಳೋದುವುದರಲ್ಲಿ ನಿಸ್ಸೀಮಳು. ಹೊಗಳುವುದರಲ್ಲೂ ತೆಗಳುವುದರಲ್ಲೂ ಬಲು ಜಾಣೆ" ಎಂದು ನಾರಾಯಣಸ್ವಾಮಿ ಆ ಹುಡುಗಿಯನ್ನು ನನಗೆ ಪರಿಚಯ ಮಾಡಿಕೊಟ್ಟರು. ಅಂತೆಯೇ

"ಇವರು ಸೋಮಸುಂದರಂ; ನಿನ್ನ ಕೈಯಲ್ಲಿರುವ 'ತಾವರೆ'ಯ ಸಂಪಾದಕರು" ಎಂದು ಅವಳಿಗೆ ನನ್ನ ಪರಿಚಯ ಮಾಡಿಸಿದರು.

ಅವಳು ಮೌನವಾಗಿ ಎದ್ದು ಕೈಜೋಡಿಸಿ ವಂದಿಸಿ ಮತ್ತೆ ಗಂಭೀರವಾಗಿ ಕುಳಿತಳು—ನನ್ನ ಮನಸ್ಸು ತಲ್ಲಣಿಸಿತು: ಇವಳು! ಈ ಹುಡುಗಿ! ಆತನ ಹೆಂಡತಿಯೇ?

"ಇಗೋ, ಒಂದು ನಿಮಿಷದಲ್ಲಿ ಬರುತ್ತೇನೆ; ಮಾತನಾಡುತ್ತಿರಿ" ಎಂದು ಹೇಳಿ ನಾರಾಯಣಸ್ವಾಮಿ ಮನೆಯೊಳಕ್ಕೆ ಹೋದರು. ನನ್ನ ಮನಸ್ಸಿನ ಹೊಯ್ದಾಟ ಇನ್ನೂ ನಿಲ್ಲಲಿಲ್ಲ. ಇವಳು ಯಾರು? ಅವರ ಮಗಳೇ? ಅಥವಾ ಮನೆಯಾಕೆಯೇ?

"ನೀವು ಬಂದು ಇವರಿಗೆ...."

"ಮನೆಯಾಕೆ" ಎಂದಳು ಚುರುಕಾಗಿ.

ಅದನ್ನು ಕೇಳಿ ನನಗೆ ಸೋಜಿಗವೆನ್ನಿಸಿತು. ಅಲ್ಲಿ ಸುಖಕರವಾಗಿ ಬೀಸುತ್ತಿದ್ದ ತಂಗಾಳಿಯ ಪರಿವೆಯೇ ನನಗಿರಲಿಲ್ಲ. ಮೇಜಿನ ಮೇಲಿದ್ದ ಒಂದು ಅಗಲವಾದ ಪತ್ರಿಕೆಯನ್ನು ತೆಗೆದು ಗಾಳಿ ಬೀಸಿಕೊಳ್ಳಲಾರಂಭಿಸಿದೆ.

—ಮನೆಯಾಕೆ! ಈ ಚಿಕ್ಕ ಹುಡುಗಿ ಅವರಿಗೆ ಹೆಂಡತಿ! ಇದು ಸರಿಯೇ? ನ್ಯಾಯವೇ ಮುಂತಾಗಿ ವಿಚಾರದ ತಾಕಲಾಟಕ್ಕೆ ಸಿಲುಕಿ ನನ್ನ ಮನಸ್ಸು ಭಾವಸಮಾಧಿಗೈದುತ್ತಿರುವುದನ್ನು ತಡೆಯುವವಳಂತೆ ಅವಳು ಮಾತನಾಡಿದಳು.

"ನಿಮ್ಮ ಕತೆಗಳೆಲ್ಲವನ್ನೂ ನಾನು ಬಿಡದೆ ಓದುತ್ತಿದ್ದೇನೆ."

"ಸಂತೋಷ."

"ನಾನೂ ಇವತ್ತು ಕಾಲೇಜಿಗೆ ಬರೋಣವೆಂದಿದ್ದೆ."

"ಬಂದಿರಬಹುದಿತ್ತಲ್ಲ! ಸಭೆ ಚೆನ್ನಾಗಿ ನಡೆಯಿತು."

"ನಾನು ಓದಿದ ಸ್ಥಳ; ಇನ್ನೂ ನನ್ನ ಗೆಳತಿಯರು ಅಲ್ಲಿ ಓದುತ್ತಿದ್ದಾರೆ. ಕಂಡರೆ ಬಿಡುವುದಿಲ್ಲ. ಅದರಿಂದಲೇ...."

"ಸರಿ!"

"ಕಾಂತಳೂ ನನ್ನೊಡನೆ ಇಂಟರಿನಲ್ಲಿ ಓದಿದವಳು."

ನನಗೆ ತಟ್ಟನೆ ಜ್ಞಾಪಕಕ್ಕೆ ಬಂತು. ನನ್ನ ಬಳಿ ಕುಳಿತಿರುವ ಈ ಲಲಿತ ಯಾರೆಂಬುದು ಈಗ ಸ್ಪಷ್ಟವಾಯಿತು. ನಿನ್ನೆ ಬೆಳಗ್ಗೆ ಕಾಂತಳು ನನ್ನೊಡನೆ ಹೇಳಿದ ಆ ವಿಚಿತ್ರ ವ್ಯಕ್ತಿ ಇವಳೇ ಆಗಿರಬೇಕು. ನೆಲದಲ್ಲಿ ಕಾಲು ಚೀಳಪೆ ನಡೆಯಲು ಬಯಸುವ ಮನುಷ್ಯರ ಹಾಗೆ, ಬಾನಿನಲ್ಲಿ ಮಿನುಗುವ ಮೀನುಗಳನ್ನು ದೋಚಿ ಚೆಲ್ಲಾಟವಾಡಲು ಹವಣಿಸುವಂಥಾ 'ಆದರ್ಶ' ಹುಚ್ಚಿ ಇವಳೇ ಇರಬೇಕು ಎನ್ನಿಸಿತು ನನಗೆ.

"ನನ್ನ ಕತೆಗಳನ್ನು ಹಿಡಿಸದ ಒಂದು ಹುಡುಗಿ ಎಂಬ ರೀತಿಯಲ್ಲಿ ಕಾಂತಳು ನಿಮ್ಮನ್ನು ಕುರಿತು ಹಿಂದೆಯೇ ಹೇಳಿದ್ದಾಳೆ" ಎಂದೆ.

"ಹಿಡಿಸದಿದ್ದರೆ ಏಕೆ ಓದುತ್ತೇನೆ! ಪ್ರೇಮವನ್ನು ಸುಂದರವಾಗಿ ಚಿತ್ರಿ

ಸುವ ನೀವು ಜನರ ಇತರ ಸಂಕಟಗಳನ್ನೂ ಮನಮುಟ್ಟುವಂತೆ ಚಿತ್ರಿಸ ಬಾರದೇಕೆ?"

"ಹೌದು, ಅದನ್ನೂ ನಾನು ಮರೆತಿಲ್ಲ. ಆದರೆ ಮಾನವ ಜೀವನದ ಅಭ್ಯುದಯಕ್ಕೆ ಪ್ರೇಮಬಂಧನವು ಸರಿಯಾದ ರೀತಿಯಲ್ಲಿ ಹೊಂದಿಕೊಂಡಿರ್ಬೇಕಾದ್ದು ಅತ್ಯಾವಶ್ಯಕವಲ್ಲವೇ?" ಎಂದು ಕೇಳಿದೆ.

ಅಷ್ಟರಲ್ಲೇ ನಾರಾಯಣಸ್ವಾಮಿ ಅಲ್ಲಿಗೆ ಬಂದರು.

"ಹೊಸ ಆಹಾರ ಬೆಳೆಸುವ ಯೋಜನೆಗೆ ಲಲಿತ ಎಷ್ಟು ಸಹಕರಿಸುತ್ತಿದ್ದಾಳೆ ಗೊತ್ತೇನು? ಇವಳು ಬಂದಮೇಲೆ ಈ ತೋಟದಲ್ಲಿ ಬರೀ ಬದನೇಕಾಯಿಯಾಗಿ ಬೆಳೆಯುತ್ತಿವೆ. ನನ್ನ ಕೈಯಲ್ಲಿ ಸರಕಾರವಿದ್ದರೆ ಇವಳೇ ನಾಡಿನ ಆಹಾರ ಸಚಿವೆ" ಎಂದರು ನಾರಾಯಣಸ್ವಾಮಿ.

"ಆಮೇಲೆ ಉದ್ಯಾನವನವೆಲ್ಲವೂ ಜೋಳದ ಬೀಡಾಗಬೇಕು. ಸಾಹಿತಿಗಳೆಲ್ಲರೂ ನೇಗಿಲು ಹಿಡಿಯಬೇಕು ಎಂದು ಆಜ್ಞೆ ಹೊರಟರೂ ಹೊರಡಬಹುದು" ಎಂದೆ.

ನಾ ರಾ ಯ ಣ ಸ್ವಾ ಮಿ ನಕ್ಕರು. ಅವಳ ಮುಖವೂ ಸ್ವಲ್ಪ ಕೆಂಪಗಾಯ್ತು.

ನಮಗೆ ತಿಳಿದ ಪ್ರಖ್ಯಾತ ವಿಶ್ವಸಾಹಿತಿಗಳ ಬಗ್ಗೆ ಸ್ವಲ್ಪ ಹೊತ್ತು ಮಾತನಾಡಿಕೊಂಡಿದ್ದೆವು. ಆಮೇಲೆ ನಾರಾಯಣಸ್ವಾಮಿ ತಮ್ಮ ವಾಚನಾಲಯಕ್ಕೆ ನನ್ನನ್ನು ಕರೆದುಕೊಂಡು ಹೋದರು. ಲಲಿತಳೂ ಜೊತೆಯಲ್ಲಿ ಬಂದಳು. ಸಾವಿರಾರು ಗ್ರಂಥಗಳು, ತಮಿಳೂ ಆಂಗ್ಲವೂ ಆಗಿ ನಾರಾಯಣ ಸ್ವಾಮಿಯವರ ಪುಸ್ತಕ ಭಂಡಾರದಲ್ಲಿ ತುಂಬಿತ್ತು. ಅದನ್ನು ನೋಡುತ್ತಿದ್ದರೇ ಸಾಕು ಆತ್ಯಾನಂದವಾಗಿತ್ತು ನನಗೆ.

ಕಾ. ಶ್ರೀ. ಶ್ರೀ. ಯವರ ಅನುವಾದಗಳಾದ ಖಾಂಡೇಕರ್‌ರವರ ಕಾದಂಬರಿಗಳಲ್ಲೊಂದನ್ನು ಕೈಗೆ ತೆಗೆದುಕೊಂಡಳು ಲಲಿತ.

"ಖಾಂಡೇಕರ್‌ರವರನ್ನು ಕುರಿತು ನಿಮ್ಮ ಅಭಿಪ್ರಾಯವೇನು?" ಎಂದು ಕೇಳಿದಳು.

"ಸೊಗಸನ್ನು ಚೆಲ್ಲುವ ಕಾವ್ಯಮಯ ಶೈಲಿ, ಆಕರ್ಷಕ ಉಪಮಾನ

ಗಳು, ಗಂಟಲು ತುಂಬಿ ಬರುವಂಥಾ ಸನ್ನಿವೇಶಗಳು—ಇವು ಖಾಂಡೇಕರ್ ಕತೆಗಳಲ್ಲಿ ನಾವು ಕಾಣುವ ಉತ್ತಮ ಅಂಶಗಳು."

"ಆದರೆ ಅವರ ಹಲವು ಕತೆಗಳು ಒಂದೇ ರೀತಿ ಇವೆ; ಶೈಲಿಯ ಸೊಬಗು ಬದಲಾದರೆ ಸಾಕೇ?"

"ನಿಜ, ಅವರ ಕತೆಯ ತತ್ವದಲ್ಲಿ ಹೆಚ್ಚು ವೈವಿಧ್ಯತೆಯಿಲ್ಲ."

ಸ್ವಲ್ಪ ಹೊತ್ತಾದ ಮೇಲೆ ನಾನು ಅವರ ಅಪ್ಪಣೆ ಪಡೆದು ಹೊರಡಲನುವಾದೆ.

"ಆಗಾಗ ಬಂದು ಹೋಗುತ್ತಿರಿ ಸೋಮು. ಈ ಮನೆಯಲ್ಲಿ ನನಗೆ ಯಾವ ಕೆಲಸವೂ ಇಲ್ಲ. ನೀವು ನೆನೆದ ಹಾಗೆಲ್ಲಾ ಬರಬಹುದು. ನೀವು ಬಂದರೆ ನಮಗೆ ಬಹಳ ಸಂತೋಷವಾಗಿರುತ್ತದೆ"

—ಎಂದರು ನಾರಾಯಣಸ್ವಾಮಿ.

ನಗುನಗುತ್ತಾ ಕೈಜೋಡಿಸಿ ವಂದಿಸಿದಳು ಲಲಿತ.

ದೊಡ್ಡ ವಾಚನಾಲಯ, ತಣ್ಣಗೆ ಮಂದಮಾರುತವನ್ನು ಬೀಸುವ ಉದ್ಯಾನವನ, ಎಲ್ಲಕ್ಕಿಂತಲೂ ಹೆಚ್ಚಾಗಿ ರಸಿಕ ಹೃದಯಗಳನ್ನು ಪಡೆದ ಇಬ್ಬರು ಸೋಮಾರಿಗಳಿರುವ ಈ ಬಂಗಲೆಯು ಯಾವ ಸಾಹಿತಿಯನ್ನು ತಾನೇ ಆಕರ್ಷಿಸದಿರುತ್ತದೆ?

೩

'ಹೆಣ್ಣನ್ನು ಸಿಂಗರಿಸುವುದಕ್ಕೆಂದೇ ದೇವರು ನಿತ್ಯವೂ ಹೊಸ ಹೂ ರಾಶಿಯನ್ನು ಸುರಿಯುತ್ತಿರುವಾಗ, ಅವರಿಗೆ ಹೊನ್ನು, ಮುತ್ತು ರತ್ನಗಳು, ವಜ್ರವೈಢೂರ್ಯಗಳು ಏಕೆ? ಅವರೇಕೆ ಕೃತ್ರಿಮ ಸೌಂದರ್ಯ ಸಾಧನಗಳನ್ನು ಅರಸಿ ಅಲೆಯುತ್ತಾರೆ?' ಎಂಬ ಭಾವವನ್ನು ವಿಶ್ವಕವಿ ರವೀಂದ್ರರು ಎಲ್ಲೋ ಒಂದು ಕಡೆ ವ್ಯಕ್ತಪಡಿಸಿದ್ದುದು, ಇಂದು ನಾನು ಲಲಿತಳನ್ನು ಕುರಿತು ಯೋಚಿಸಿದಾಗ ಜ್ಞಾಪಕಕ್ಕೆ ಬಂತು. ಚಿಕ್ಕ ರತ್ನಹಾರ ಮತ್ತು ಉದ್ದನೆಯ ಚಿನ್ನದ ಸರವೊಂದನ್ನು ಧರಿಸಿದ್ದಳು. ಕೈಗಳಲ್ಲಿ ಎರಡು ಗಾಜಿನ ಬಳೆಗಳು ಇದ್ದುವು. ಕಿವಿಯಲ್ಲಿ ಮಾತ್ರ ವಜ್ರದ ಬೆಂಡೋಲೆಯು ಹೊಳೆಯುತ್ತಿತ್ತು.

ಕಿತ್ತಳೇ ಬಣ್ಣದ ನೂಲಿನ ಸೀರೆಯನ್ನುಟ್ಟು, ಅದೇ ಬಣ್ಣದ ಕುಪ್ಪಸ ತೊಟ್ಟು ಉತ್ತರದಲ್ಲಿ ನಾನು ಕಂಡ ಒಂದು ಆಶ್ರಮದ ಹುಡುಗಿಯ ಹಾಗೆ ಅವಳು ಆ ಮನೆಯಲ್ಲಿ ನಿಶ್ಚಿಂತೆಯಿಂದಿದ್ದಳು. ಸಾಧಾರಣವಾಗಿ ಅವಳು ತಲೆಯೆತ್ತಿ ನನ್ನನ್ನು ನೋಡಿದಾಗ, ಅವಳ ಕಣ್ಣುಗಳಲ್ಲಿ ಯಾವ ವಿಧವಾದ ಆಕರ್ಷಣೆಯೂ ಇರುತ್ತಿರಲಿಲ್ಲ. ಆದರೆ ಅವು ಹಗಲುಗನಸುಗಳನ್ನು ಕಾಣುತ್ತಿರುವ ಹಾಗಿದ್ದುವು. ಕಲ್ಪನಾಲೋಕದಲ್ಲಿ ವಿಹರಿಸುತ್ತಾ, ಕಾವ್ಯವನ್ನು ಹೇಳುತ್ತಿರುವಂತೆ ಆ ಕಣ್ಣುಗಳು ಹೊಳೆಯುತ್ತಿದ್ದುವು. ನನಗೆ ಆ ದೃಷ್ಟಿ, ಸಂಧ್ಯಾಸಮಯದಲ್ಲಿ ದಿಗಂತವನ್ನು ಮುಟ್ಟುತ್ತಿರುವ ಪ್ರಶಾಂತ ನೀಲಗಡಲಿನಂತೆ ಕಾಣುತ್ತಿತ್ತು.

ಹಿರಿಯಜೀವಿ ನಾರಾಯಣಸ್ವಾಮಿ:—

ನಾನು ಅವರನ್ನು ಮೊದಲು ಕಾಲೇಜಿನಲ್ಲಿ ಸಂಧಿಸಿದಾಗ, ಅವರ ಬಗ್ಗೆ ನನಗುಂಟಾದ ಪ್ರೀತ್ಯಾದರಗಳು, ಅಂದು ಸಂಜೆ ಲಲಿತಳನ್ನು ಸಂಧಿಸಿದ

ನಂತರ, ಕುಗ್ಗದೆ ಹಾಗೇ ಇದ್ದುವೆಂದು ಹೇಳಲಾಗುವುದಿಲ್ಲ. ಮಾನವನ ವಿಚಿತ್ರ ಬಯಕೆಗಳೂ, ಅವುಗಳ ಭಯಂಕರ ಪರಿಣಾಮಗಳನ್ನೂ ಕುರಿತು ನಾನು ದೀರ್ಘವಾಗಿ ಯೋಚಿಸಿದೆ. ನಡೆ, ನುಡಿಗಳಲ್ಲಿ ಸಭ್ಯರಂತೆ ಕಾಣುವ ಮನುಷ್ಯರ ಹೊರಗಿನ ಸೋಗನ್ನು ಕಿತ್ತೆಸೆದು, ಅವರ ಮನಸ್ಸಿನಲ್ಲಿ ಬೀಡು ಬಿಟ್ಟಿರುವ ವಿಚಿತ್ರ ಭಾವನೆಗಳ ಚಿತ್ರವನ್ನು ಅರಿಯಲು ಸಾಧ್ಯವಾದರೆ....

ನಾರಾಯಣಸ್ವಾಮಿಯವರ ಬಗೆಗೆ ನನ್ನಲ್ಲಿ ಅನಾದರವುಂಟಾದರೂ, ಅವರಿಂದ ದೂರವಿರಲು ನನಗೆ ಸಾಧ್ಯವಾಗದೆ ಹೋಯಿತು. ಅವರ ಜತೆ ನಾನು ಕಳೆದ ಆ ಎರಡು ಗಂಟೆಗಳ ಕಾಲದಲ್ಲೇ ಅದು ಯಾವ ಮೋಹಕ ಶಕ್ತಿಯಿಂದಲೋ ಅವರು ನನ್ನನ್ನು ಆಕರ್ಷಿಸಿದ್ದರು. ಅವರು ನನಗೆ ತೀರ ಆತ್ಮೀಯರಂತೆ ಕಂಡರು. ಅವರ ನಡೆ, ನುಡಿ ಮತ್ತು ನೋಟಗಳು ನನ್ನನ್ನು ನನಗರಿಯದಂತೆಯೇ ಅವರಲ್ಲಿ ಅನುತಾಪಗೊಳ್ಳುವಂತೆ ಮಾಡಿದ್ದವು.

ಮರುದಿನ ಬೆಳಗ್ಗೆ ಎಂಟು ಗಂಟೆಯಿರಬಹುದು. ಕಾಂತಳು ಕಾಲೇಜಿಗೆ ಹೊರಡುವಾಗಿನ ಪೋಷಾಕನ್ನು ಧರಿಸಿ, ನನ್ನ ಕೊಠಡಿಯಲ್ಲಿ ಕಾಣಿಸಿಕೊಂಡಳು. ಅವಳ ಕೈಯಲ್ಲಿ ಒಂದು ದೊಡ್ಡ 'ಫ್ಲಾಸ್ಕ್' ಇತ್ತು.

"ನೀವು ಬಹಳ ದೊಡ್ಡಮನುಷ್ಯರಾಗಿಬಿಟ್ಟಿರಿ"

—ಎಂದಳು ಕೋಪದಿಂದ.

"ಆಗಬೇಕಾದ್ದು ತಾನೇ! ಹೇಗೆ ಕಾಣುತ್ತೇನೆ ನಿನಗೆ? ಅರವತ್ತು ವರ್ಷದ ಮುದುಕನ ಹಾಗೆ ಕಾಣುತ್ತೇನಲ್ಲವೆ?"

"ಹೌದು. ಅರವತ್ತು ವರ್ಷದ ಮುದುಕರಾದರೆ, ನೀವೂ ಸೊಗಸಾಗಿ ಒಂದು ಎಳೆಯ ಹುಡುಗಿಯನ್ನು ಮದುವೆಯಾಗಬಹುದಲ್ಲವೇ?"

—ಎಂದಳು ಕೊಂಕಾಗಿ.

ನಾನು ಸುಮ್ಮನಿದ್ದೆ. ಅವಳ ಬಾಯಿಗೆ ಬೀಗ ಹಾಕಲು ಯಾರಿಂದ ಸಾಧ್ಯ?

"ಹೌದು, ಆ ಮುದುಕರೊಂದಿಗೆ ನಿಮಗೇನು ಕೆಲಸ?"

"ನಿಮಗೆ ಮಾತ್ರವೇನು ಕೆಲಸವಂತೆ. ಅವರನ್ನೇಕೆ ಭಾಷಣ ಮಾಡಲು ಕರೆದಿರಿ?"

"ಅವರ ಹತ್ತಿರ ಪುಸ್ತಕಗಳನ್ನು ಪಡೆಯುವುದಕ್ಕಾಗಿ"

—ಎಂದಳು.

"ನಾನೂ ಅದಕ್ಕಾಗೇ ಹೋದೆ."

"ನಿಮಗೇನೇನು ಪುಸ್ತಕಗಳು ಬೇಕು ಹೇಳಿ. ಹೊಸಹೊಸದನ್ನು ನಾನು ಕೊಡಿಸುತ್ತೇನೆ. ನನ್ನ ಸ್ವಂತ ಹಣದಲ್ಲಿ ನಾನೇ ಕೊಂಡು ತರುತ್ತೇನೆ"

—ಎಂದಳು, ಮಕ್ಕಳಿಗೆ ಆಟದ ಸಾಮಾನುಗಳನ್ನು ಕೊಡಿಸುವುದಾಗಿ ಹಿರಿಯರು ಹೇಳುವ ಹಾಗೆ.

ನನಗೆ ನಗುಬಂತು.

"ನಮಗೆ ಬೇಕೆನ್ನಿಸುವ ಎಲ್ಲ ವಸ್ತುಗಳನ್ನೂ ದುಡ್ಡಿನಿಂದ ಪಡೆಯಲು ಸಾಧ್ಯವಿಲ್ಲ ಕಾಂತಾ"

—ಎಂದು ಹೇಳಿ ನಕ್ಕೆ.

ಅವಳು ಸ್ವಲ್ಪ ಪೆಚ್ಚಾದಳು. ಸ್ವಲ್ಪ ಹೊತ್ತು ಯೋಚಿಸಿದಳು. ಮತ್ತೆ ಚೇತರಿಸಿಕೊಂಡು, ಫ್ಲಾಸ್ಕನ್ನು ತೆರೆದು ಕಾಫಿಯನ್ನು ಬಟ್ಟಲಿಗೆ ಸುರಿದು ನನ್ನ ಮುಂದಿಟ್ಟಳು.

"ನಿನ್ನೆ ನಿಮ್ಮ ಹೋಟಲ್ ಕಾಫಿ ಕುಡಿದು ನನಗೆ ತಲೆನೋವು ಬಂದಿತ್ತು. ಆದರಿಂದ ಇವತ್ತು ನಾನೇ ಕಾಫಿ ಮಾಡಿ ತಂದಿದ್ದೀನಿ, ಕುಡಿಯಿರಿ. ಒಳ್ಳೆಯ ಕಾಫಿಯನ್ನು ಕೊಟ್ಟರೆ, ಒಂದು ಒಳ್ಳೆಯ ಕತೆಯನ್ನು ಬರೆಯುತ್ತೀರಿ! ಅಲ್ಲವೇ?"

—ಎಂದಳು ನಗುತ್ತಾ.

"ಹಾಗಾದರೆ, ಇದುವರೆಗೆ ಬರೆದ ಕತೆಗಳು....?"

"ನೋಡಿದಿರಾ! ಬೇಕೆಂದೇ ನನ್ನೊಡನೆ ಜಗಳಕ್ಕೆ ಬರುತ್ತಿದ್ದೀರಿ!"

—ಎಂದಳು ಹುಸಿಮುನಿಸಿನಿಂದ.

ಕಾಫಿ ಕುಡಿದೆ. ಚೆನ್ನಾಗೇ ಇತ್ತು. ಅದರಿಂದಲೇ ಅದು ಅವಳು ಮಾಡಿದ ಕಾಫಿಯಲ್ಲವೆಂದು ತಿಳಿದುಕೊಂಡೆ. ಅವಳ ಪಾಕವಿದ್ಯೆಯ ಬಗ್ಗೆ ಅವಳ ತಂದೆ ಹಿಂದೆಯೇ ಒಂದು ಬಾರಿ ಬಹಳ ರಸವತ್ತಾಗಿ ಬಣ್ಣಿಸಿ ಹೇಳಿದ್ದರು. ಮೂರು ಗ್ಯಾಲನ್ ಪೆಟ್ರೋಲ್ ಮತ್ತು ಮೂರು ಬೆಂಕಿಪೆಟ್ಟಿಗೆ ಗಳಿದ್ದರೆ, ಮೂವತ್ತು ನಿಮಿಷಗಳಲ್ಲಿ ಒಲೆಯನ್ನು ಹತ್ತಿಸಿಬಿಡುತ್ತಿದ್ದಳಂತೆ!

"ಲಲಿತಳೂ ನಿನ್ನ ಬಗ್ಗೆ ಹೇಳಿದಳು."

"ಓಹೋ! ಅವಳನ್ನೂ ನೋಡಿ ಬಂದಿರೇನು? ಏನೆಂದಳು?"

"ಕಾಂತಳು ತುಂಬಾ ಒಳ್ಳೆಯ ಹುಡುಗಿ ಎಂದಳು."

"ಸುಳ್ಳು, ಶುದ್ಧ ಸುಳ್ಳು."

ಹುಸಿಮುನಿಸಿನಿಂದ ನನ್ನನ್ನು ನೋಡಿಬಿಟ್ಟು, ಲಲಿತಳ ಜತೆ ಕಾಲೇಜಿನಲ್ಲಿ ಇವಳು ಕಳೆದ ದಿನಗಳನ್ನು ಹೇಳತೊಡಗಿದಳು. ತರಗತಿಯಲ್ಲೇ ಓದಿನಲ್ಲೂ, ಚುರುಕುತನದಲ್ಲೂ ಲಲಿತಳು ಬಹಳ ಗಟ್ಟಿಗಳಂತೆ. ಎಲ್ಲದಕ್ಕೂ ಎದುರುವಾದ ಹೂಡುತ್ತಿದ್ದಳಂತೆ. ಕೋಪವು ಅವಳಿಗೆ ಮೂಗಿನ ಮೇಲೇ ಇರುತ್ತಿತ್ತಂತೆ. ಅವಳ ನಾಯಕತ್ವದಲ್ಲಿ ಯಾವಾಗಲೂ ಹತ್ತಾರು ಮಂದಿ ಹುಡುಗಿಯರು ಸೇರಿಕೊಂಡು ತರಗತಿಯಲ್ಲಿ ಗುಲ್ಲೆಬ್ಬಿಸುತ್ತಿದ್ದರಂತೆ.

"ಹೀಗೆಲ್ಲಾ ಅವಳು ಇದ್ದಳೆಂದು ಹೇಳಿದರೆ ನಂಬುವುದಕ್ಕೇ ಆಗುವುದಿಲ್ಲವಲ್ಲಾ?"

—ಎಂದು ಹೇಳಿದೆ ವಿಸ್ಮಯಗೊಂಡ ನಾನು.

"ಅರ್ಧ ಗಂಟೆಯ ಸಹವಾಸದಲ್ಲಿ ಒಂದು ಹೆಣ್ಣಿನ ಗುಣವನ್ನು ನೀವು ಹೇಗೆ ಕಂಡುಹಿಡಿಯಬಲ್ಲಿರಿ? ಅದೂ ನಿಮ್ಮಂಥಾ ಕತೆಗಾರರ ಹತ್ತಿರ ಎಲ್ಲರೂ ಬಹಳ ಹುಷಾರಿನಿಂದ ನಡೆದುಕೊಳ್ಳಬೇಕಾಗಿದೆಯಲ್ಲವೇ?"

—ಎಂದು ಹೇಳಿ ಅವಳು ಒಂದು ಗಳಿಗೆ ನನ್ನನ್ನು ದುರುಗುಟ್ಟಿ ನೋಡಿಬಿಟ್ಟು ಮುಂದೆ ಮಾತನಾಡಿದಳು.

"ಪಾಪ! ಒಂದು ವೇಳೆ ಲಲಿತಳ ಸ್ವಭಾವವೇ ಈಗ ಬದಲಾಗಿರಬಹುದು. ಮುದುಕರನ್ನು ಮದುವೆಯಾದ ಯಾವ ಹೆಣ್ಣಿಗೆ ತಾನೆ ಸಂತೋಷದಿಂದಿರಲಾಗುತ್ತದೆ?"

"ಅವಳೇಕೆ ಮದುವೆಯಾದಳು ?"

"ಅವಳು ಬಡವಳು; ಆತ ಶ್ರೀಮಂತ."

"ಬಡವರ ಪ್ರೀತಿಯನ್ನೂ ಶ್ರೀಮಂತರು ಬೆಲೆಕೊಟ್ಟು ಕೊಂಡು ಕೊಳ್ಳಲು ಬಯಸುತ್ತಾರೆ, ಅಲ್ಲವೆ !"

—ಎಂದು ಅವಳ ಮುಖವನ್ನು ದಿಟ್ಟಿಸಿದೆ.

ನಾನು ಬಡವನೆಂಬುದು ಕಾಂತಳಿಗೆ ಗೊತ್ತು.

"ಏನು ಹೇಳ್ತೀರಿ ?"

—ಎಂದು ಕಾತುರಳಾಗಿ ಕೇಳಿದಳು.

"ನಾನು ನಾರಾಯಣಸ್ವಾಮಿಯವರನ್ನು ಕುರಿತು ಹೇಳಿದೆ."

"ಹಾಗೆ ಹೇಳಿ; ನೀವು ಬಹಳ ಒಳ್ಳೆಯವರು."

"ದಯವಿಟ್ಟು ನನ್ನನ್ನು ಒಳ್ಳೆಯವನೆಂದು ಹೇಳಬೇಡ. ನನ್ನನ್ನು ವಂಚಿಸಬೇಕೆನ್ನುವವರೆಲ್ಲರೂ ಹೀಗೇ ಹೇಳುತ್ತಾರೆ !"

"ನೀವೇ ನನ್ನನ್ನು ವಂಚಿಸಲು ನೋಡುತ್ತೀರಿ. ಈ ಎರಡು ತಿಂಗಳಿಂದ ವಂಚಿಸುತ್ತ ಬಂದಿದ್ದೀರಿ"

—ಎಂದಳು. ಅವಳ ಧ್ವನಿ ಸ್ವಲ್ಪ ಗಡುಸಾಗಿತ್ತು.

"ನಾನೇ !"

"ಹೌದು."

"ನನಗೇನೂ ತಿಳಿಯಲಿಲ್ಲ, ಕಾಂತಾ !"

"ನಿಮಗೆ ತಿಳಿಯದೇ ಹೋದರೆ, ಇನ್ನು ಯಾರಿಗೆ ತಿಳಿಯುತ್ತೆ ? ನಾನೇನೂ ಎಳೆಯ ಮಗುವಲ್ಲ !"

"ಎಳೆಯ ಮಗುವಲ್ಲ; ಬಿ.ಎ. ಓದುವ ಬೆಳೆದ ಮಗು ಅಲ್ಲವೆ ?"

ಅವಳ ಕಣ್ಣೆವೆಗಳು ಅಲುಗಾಡಲಿಲ್ಲ. ತುಟಿ ಮಾತ್ರ ಅಲುಗಾಡಿತು.

"ನೀವು ಮಾತ್ರ ಏನೂ ತಿಳಿಯದ ಮಗುವಿನ ಹಾಗೆ ನಟಿಸಲು ನೋಡುತ್ತಿದ್ದೀರಿ"

—ಎಂದು ಹೇಳಿ ತಲೆ ತಗ್ಗಿಸಿದಳು. ತಗ್ಗಿಸಿದ ತಲೆಯನ್ನು ಮೇಲಕ್ಕೆತ್ತಲಿಲ್ಲ. ಆಳವಾದ ಮೌನದಲ್ಲಿ ಮುಳುಗಿದ್ದಳು.

"ಕಾಂತಾ !"

ತಲೆಯೆತ್ತಿ ನೋಡಿದಳು. ಮುಂದಕ್ಕೆ ಏನು ಮಾತನಾಡಬೇಕೆಂಬುದು ನನಗೆ ತಿಳಿಯದೆ ತಡವರಿಸಿದೆ.

"ನಾನು ಹೋಗಿ ಬರಲೇ"

—ಎಂದು ಅವಳು ಎದ್ದಳು.

"ಅಣ್ಣಾ ಎಂದು ಕರೆಯುತ್ತೇನೆಂದು ಹೇಳಿದ್ದೆಯಲ್ಲ! ಏಕೆ ಒಂದು ಬಾರಿಯಾದರೂ ಹಾಗೆ ಕರೆಯಲಿಲ್ಲ?"

"ಅದು ನನಗೆ ಹಿಡಿಸಲಿಲ್ಲ" ಎಂದು ಕೋಪದಿಂದ ಎದ್ದು ಫ್ಲಾಸ್ಕನ್ನು ತೆಗೆದುಕೊಂಡು ಹೊರಟಳು. ಅವಳು ತಿರುಗಿದ ರಭಸಕ್ಕೆ ಅವಳ ಎರಡು ಜಡೆಗಳಿಗೂ ಮಧ್ಯೆ ಸೇತುವೆಯ ಹಾಗೆ ಕಂಗೊಳಿಸುತ್ತಿದ್ದ ಕನಕಾಂಬರವು ಕೆಳಗೆ ನೆಲದ ಮೇಲೆ ಬಿತ್ತು. ಅದನ್ನು ಕೈಗೆ ತೆಗೆದುಕೊಂಡು,

"ತಗೋ ಕಾಂತಾ! ಹೂ ಕೆಳಗೆ ಬಿದ್ದುಬಿಟ್ಟಿದೆ"

—ಎಂದು ಹೇಳಿ ಕೂಗಿದೆ.

ಕಾಂತಳು ತಿರುಗಿ ಬಂದಳು; ಸ್ವಲ್ಪ ತಡೆದು, ಯೋಚಿಸಿ, ಹಿಂದಕ್ಕೆ ತಿರುಗಿ ನಿಂತು,

"ಹಾಗೇ ಮುಡಿಸಿ ಬಿಡುತ್ತೀರಾ?"

—ಎಂದಳು.

"ಮಾಲಿಕರ ಮಗಳೆಂದ ಮೇಲೆ ಈ ಕೆಲಸವೂ ಮಾಡದಿದ್ದರೆ...."

—ಎಂದು ಹೇಳಿ, ನಡುಗುತ್ತಿರುವ ಕೈಯಿಂದ ಹೂವನ್ನು ಅವಳ ತಲೆಯ ಬಳಿ ತೆಗೆದುಕೊಂಡು ಹೋದೆ.

"ಹಾಗೆಂದರೆ ಬೇಡ"

—ಎಂದವಳೇ ಹೂವನ್ನು ನನ್ನ ಕೈಯಿಂದ ಕಿತ್ತುಕೊಂಡು, ತನ್ನ

ಕೈಯಿಂದ ಹಿಸುಕುತ್ತಾ ಹೊರಗೆ ನಡೆದಳು. ಪ್ರೀತಿಗೂ ಪ್ರೇಮಕ್ಕೂ ಇರುವ ಅಂತರವನ್ನು ಅರಿಯಲಾರದ ಅವಳ ಹತ್ತಿರ ನಾನು ಹೇಗೆ ನನ್ನ ಮನಸ್ಸನ್ನು ಬಿಚ್ಚಿ ಹೇಳುವುದು ?

ಹನ್ನೊಂದು ಗಂಟೆಯಿರಬಹುದು. ಆಫೀಸ್ ಕೊಠಡಿಯಲ್ಲಿ ಅಂದಿನ ಅಂಚೆಯಲ್ಲಿ ಬಂದ ಕಾಗದಗಳನ್ನು ನೋಡುತ್ತಾ ಕುಳಿತಿದ್ದೆ. ಜಾನಕಿ ರಾಮನು ವಿಳಾಸ ಚೀಟಿಯೊಂದನ್ನು ನನ್ನ ಬಳಿ ತಂದುಕೊಟ್ಟ.

'ಸೀತಾರಾಮನ್—ಬರಹಗಾರ'

—ಎಂದಿತ್ತು ಅದರಲ್ಲಿ. ಕರೆದು ಬರಲು ಹೇಳಿದೆ.

ಬರಹಗಾರರು ಎಂದರೆ ಹೀಗೇ ಇರಬೇಕೆಂದು ಕೆಲವರು ಭಾವಿಸುತ್ತಾರಲ್ಲವೆ ? ನೋಟಕ್ಕೆ ಆ ರೀತಿಯಿರುವ ಒಬ್ಬ ಯುವಕ ವಂದನೆಯನ್ನು ಸಲ್ಲಿಸುತ್ತಾ, ತಾಂಬೂಲ ಚರ್ವಣದಿಂದ ಕೆಂಪಡರಿದ ತುಟಿಗಳಲ್ಲಿ ಮಂದಹಾಸವನ್ನು ಸೂಸುತ್ತಾ ಒಳಬಂದನು. ಅಚ್ಚ ಬಿಳಿಯ ಪಂಚೆಯನ್ನುಟ್ಟು, ಅರದಳ ಬಣ್ಣದ ಜುಬ್ಬವನ್ನು ಧರಿಸಿದ್ದನು. ಅವನ ಬಲಗೈಯಲ್ಲಿ ಮಿನುಗುವ ಚರ್ಮದ ಚೀಲವೊಂದಿತ್ತು. ಇದುವರೆಗೆ ಅವನು ಬರೆದಿರುವ ಪತ್ರಿಕೆಗಳ ಹೆಸರುಗಳನ್ನು ಹೇಳಿದನು. ಮುಖ್ಯವಾದ ಪತ್ರಿಕೆಗಳಲ್ಲಿ ಒಂದಾದರೂ ಆ ಸಾಲಿನಲ್ಲಿರಲಿಲ್ಲ.

"ಈ ಕತೆಗಳನ್ನು ಕೊಂಚ ನೋಡಿ; ನಾನು ಸಂಜೆಗೆ ನಿಮ್ಮನ್ನು ಬಂದು ಕಾಣುತ್ತೇನೆ"

—ಎಂದು ಚೀಲದಿಂದ ನಾಲ್ಕು ಕತೆಗಳನ್ನು ಒಟ್ಟಿಗೆ ತೆಗೆದು ನನ್ನ ಕೈಗೆ ಕೊಟ್ಟನು.

"ನೀವು ಬರಬೇಕಾದ ಅವಶ್ಯಕತೆಯಿಲ್ಲ. ಕತೆಗಳನ್ನು ನೋಡಿ, ವಿವರವನ್ನು ಬರೆಯಲು ಹೇಳುತ್ತೇನೆ."

"ಇಲ್ಲ. ಇವತ್ತು ಅವಸರವಾಗಿ ಹೊರ ಊರಿಗೆ ಹೋಗಬೇಕಾಗಿದೆ. ನನಗಾಗಿ ಸ್ವಲ್ಪ ನೋಡಿಕೊಡಲು ಹೇಳಿ. ನಿಮಗೆ ಹಿಡಿಸದಿದ್ದರೆ ಬೇರೆ ಪತ್ರಿಕೆಗಳಿಗೆ ಕೊಡಬಹುದಲ್ಲವೆ ?"

—ಎಂದನು.

ಅಷ್ಟು ಅವಸರಪಡಲು ನಮ್ಮಿಂದ ಸಾಧ್ಯವಿಲ್ಲ. ಸಾವಕಾಶವಾಗಿ ನೋಡಿ ಹೇಳುತ್ತೇವೆ ಎಂದು ಹೇಳೋಣವೆಂದಿದ್ದೆ. ಅಷ್ಟರಲ್ಲೇ ಅವನು ಎದ್ದುಬಿಟ್ಟ. ಹೋಗುವಾಗ

"ನಾರಾಯಣಸ್ವಾಮಿ ಇದ್ದಾರಲ್ಲಾ, ಅವರಿಗೆ ನಾನು ಹತ್ತಿರದ ನೆಂಟ"

—ಎಂದು ಹೇಳಿ ಹೊರಟನು.

ಉಪಸಂಪಾದಕ ಶಂಕರನ್‌ರವರಿಗೆ ಆ ಕತೆಗಳನ್ನು ಓದಿನೋಡುವಂತೆ ಕೊಟ್ಟು ಕಳುಹಿಸಿದೆ. ಒಂದು ಗಂಟೆಯ ನಂತರ ಕತೆಗಳೊಂದಿಗೆ ಅವರು ನನ್ನ ಕೊಠಡಿಗೆ ತಿರುಗಿ ಬಂದರು.

"ಕತೆಗಳೇ ಇವು? ಒಂದು ಕಲ್ಪನೆಯಿಲ್ಲ; ಶೈಲಿಯಲ್ಲಿ ಸೊಬಗಿಲ್ಲ; ಭಾವವೂ ಇಲ್ಲ. ಭೋಗವಿಲಾಸದ ಹುಚ್ಚಾಟಗಳನ್ನು ಬಿಚ್ಚು ನುಡಿಗಳಲ್ಲಿ ಬಣ್ಣಿಸಿ ಬರೆದಿದ್ದಾನೆ"

—ಎಂದು ಕೋಪದಿಂದ ಆ ಕತೆಗಳನ್ನು ನನ್ನ ಮುಂದಿಟ್ಟರು. ಕತೆಗಳಲ್ಲಿ ಒಂದನ್ನು ನಾನೂ ಓದಿ ನೋಡಿದೆ. ಅವರು ಹೇಳಿದ್ದರಲ್ಲಿ ಎಳ್ಳಷ್ಟೂ ಸುಳ್ಳಿರಲಿಲ್ಲ.

ಸಾಯಂಕಾಲ ಆ ಯುವಕ ಸೇತುರಾಮು ಬಂದನು. ಆಗ ಶಂಕರನ್ ನನ್ನೊಡನೇ ಇದ್ದರು.

"ಕತೆಗಳನ್ನು ಓದಿದೆವು. ಅವು ನಮ್ಮ ಪತ್ರಿಕೆಗೆ ತಕ್ಕುವಲ್ಲ. ತೆಗೆದುಕೊಳ್ಳಿ"

—ಎಂದು ಕತೆಗಳನ್ನು ಅವನಿಗೆ ಕೊಟ್ಟೆ.

"ಏಕೆ ತಕ್ಕುವಲ್ಲ?"

"ನಮ್ಮ ಧೋರಣೆಗೆ ನಿಮ್ಮ ಕತೆ ಸರಿಬೀಳುವುದಿಲ್ಲ"

—ಎಂದರು ಶಂಕರನ್.

"ಹೀಗೆ ಹೇಳಿದರೆ ಸಾಕೆ? ಯಾವ ರೀತಿಯಲ್ಲಿ ಸರಿಯಿಲ್ಲವೆಂಬುದನ್ನು

ಕತೆಗಾರನು ಅರಿಯಬೇಡವೇ? ನೀವು ಪ್ರೇಮಕತೆಗಳನ್ನು ತಾನೇ ಹಾಕುವುದು?"

"ನೀವು ಬರೆದಿರುವುದು ಪ್ರೇಮಕತೆಗಳೇ?"

"ಬೇರೇನು ಕತೆಗಳಂತೆ!"

"ಪ್ರೇಮದ ಬಗ್ಗೆ ಬರೆಯುವುದು ಕತ್ತಿಯಲಗಿನ ಮೇಲೆ ನಡೆಯುವ ಹಾಗೆ. ಅದಕ್ಕೆ ಸಾಕಷ್ಟು ವಿಚಾರಶಕ್ತಿ, ಶಿಕ್ಷಣ, ಹೊಣೆಗಾರಿಕೆಯ ಅರಿವು, ಯೋಗ್ಯತೆ, ಎಲ್ಲವೂ ಬೇಕು– ತಿಳಿಯಿತೇ?"

—ಎಂದು ಶಂಕರನ್ ಅವನನ್ನು ಕೋಪದಿಂದ ದುರುಗುಟ್ಟಿಕೊಂಡು ನೋಡಿದರು.

ಏನೋ ಪ್ರತ್ಯುತ್ತರ ಹೇಳಲು ಅವನು ಬಾಯೆತ್ತಿದನು. ಆದರೆ ಏನೂ ಹೇಳದೆ ಎದ್ದನು.

"ಇನ್ನು ಮೇಲೆ ಕತೆಗಳನ್ನು ಅಂಚೆಯಲ್ಲಿ ಕಳುಹಿಸಿ"

—ಎಂದರು ಶಂಕರನ್.

"ಕಳುಹಿಸುವುದೇ ಇಲ್ಲ!"

"ತುಂಬಾ ಸಂತೋಷ"

—ಎಂದರು ಶಂಕರನ್.

ಸಂಜೆ ಆರು ಗಂಟೆಯಾಯಿತು. ಆಫೀಸಿನಲ್ಲಿ ಒಬ್ಬರೂ ಇರಲಿಲ್ಲ. ಎಲ್ಲರೂ ಐದೂವರೆಗೇ ಹೊರಟುಬಿಟ್ಟರು. ನಲ್ಲಿಯ ಬಳಿಗೆ ಹೋಗಿ, ಮುಖವನ್ನು ತೊಳೆದುಕೊಂಡು, ಬೇರೆ ಬಟ್ಟೆಗಳನ್ನು ಧರಿಸಿ ಯಾವುದಾದರೂ ಸಿನಿಮಾಗೆ ಹೋಗಿ ಬರೋಣವೆಂದು ಹೊರಟೆ. ಕೊಠಡಿಗೆ ಬೀಗ ಹಾಕುತ್ತಿರುವಾಗ ಕಾಂತಳ ಚಪ್ಪಲಿಯ ಸದ್ದು ಕೇಳಿಸಿತು.

"ಎಲ್ಲಿಗೋ ಹೊರಟ ಹಾಗೆ ಕಾಣಿಸುತ್ತೆ?"

"ಸಿನಿಮಾಗೆ"

"ನಾನೂ ಬರಬಹುದೇ?"

—ಎಂದಳು. ನಾನು ಸ್ವಲ್ಪ ತಡೆದು ನಿಂತೆ.

"ಏಕೆ. ನಿಮ್ಮ ಏಕಾಂತಕ್ಕೆ ಭಂಗವಾಗುವುದೆ?"

"ಧಾರಾಳವಾಗಿ ಬರಬಹುದು. ಮನೆಯಲ್ಲಿ ಹೇಳಿ ಬಾ"

—ಎಂದೆ. ಅವಳ ಮನೆ ಪಕ್ಕದಲ್ಲೇ ಇತ್ತು. ಹೇಳಿ ಬರುವುದಾಗಿ ಹೊರಟವಳು, ಅಂಗಳದಲ್ಲಿ ಕಾರು ಬಂದು ನಿಲ್ಲುವುದನ್ನು ಕಂಡು ನನ್ನ ಬಳಿಗೆ ತಿರುಗಿ ಬಂದಳು.

"ಆ ಮುದುಕ ತನ್ನ ಮುದ್ದು ಮಡದಿಯೊಂದಿಗೆ ಬಂದಿದ್ದಾನೆ"

—ಎಂದು ಪಿಸುದನಿಯಲ್ಲಿ ನನ್ನ ಕಿವಿಯ ಬಳಿ ಹೇಳಿದಳು. ನಾನು ಹೊರಗೆ ಬರುವುದರಲ್ಲೇ ನಾರಾಯಣಸ್ವಾಮಿಯೂ ಲಲಿತಳೂ ಒಳಗೇ ಬಂದುಬಿಟ್ಟರು.

"ಕಾಂತಾ!"

—ಎಂದು ಕೂಗಿಕೊಂಡೇ ಉತ್ಸಾಹದಿಂದ ಓಡಿ ಬಂದು ಅವಳನ್ನು ಅಪ್ಪಿಕೊಂಡಳು ಲಲಿತೆ. ಅವರಿಬ್ಬರು ಸ್ವಲ್ಪ ಹೊತ್ತು ಏಕಾಂತವಾಗಿ ಕುಳಿತು ಮಾತನಾಡುತ್ತಿದ್ದರು.

"ಎಲ್ಲೋ ಹೊರಟ ಹಾಗೆ ಕಾಣುತ್ತೆ"

—ಎಂದರು ನಾರಾಯಣಸ್ವಾಮಿ.

"ಎಲ್ಲೂ ಇಲ್ಲ. ಬೇಜಾರಾಯ್ತು. ಸಿನಿಮಾಗೆ ಹೋಗಿ ಬರೋಣ ವೆಂದು ಹೊರಟೆ."

"ನಾವೂ ಸಿನಿಮಾಗೇ ಹೊರಟಿದ್ದೀವಿ—ಬನ್ನಿ ಹೋಗಿ ಬರೋಣ" ಎಂದರು.

ಲಲಿತಳೂ ಕಾಂತಳೂ ಈಗ ನಮಗೆ ಸಮೀಪದಲ್ಲಿ ಕುರ್ಚಿಗಳಲ್ಲಿ ಕುಳಿತಿದ್ದರು. ನಾರಾಯಣಸ್ವಾಮಿ ನನ್ನನ್ನು ಸಿನಿಮಾಗೆ ಕರೆದದ್ದನ್ನು ಕೇಳಿ ನಾನು ಕಾಂತಳ ಮುಖವನ್ನು ನೋಡಿದೆ. ಅವಳು ನಿನ್ನೆ ಕಾಲೇಜಿನಿಂದ ನಾನು ಅವರ ಮನೆಗೆ ಹೋಗಕೂಡದು ಎಂದು ದುರುಗುಟ್ಟಿ ನೋಡಿದಳಲ್ಲ, ಆ ರೀತಿ ನನ್ನನ್ನು ಈಗ ನೋಡುತ್ತಿದ್ದಳು.

"ಬನ್ನಿ ಎಲ್ಲರೂ ಹೋಗಿ ಬರೋಣ"

—ಎಂದಳು ಲಲಿತ.

"ಸರಿ, ಹೋಗೋಣ"

—ಎಂದು ಹೇಳಿದೆ.

"ನೀವು ಹೋಗಿ ಬನ್ನಿ; ನಾನು ಬರುವುದಿಲ್ಲ"

—ಎಂದಳು ಕಾಂತಾ.

"ಬಾ, ಕಾಂತಾ! ನಾವು ಒಟ್ಟಿಗೆ ಕೂಡಿ ಬಹಳ ದಿನಗಳಾಯಿತಲ್ಲವೇ?"

—ಎಂದಳು ಲಲಿತ.

"ಇಲ್ಲ; ನನಗೆ ಮನೆಯಲ್ಲಿ ಕೆಲಸವಿದೆ."

ಚಪ್ಪಲಿಯನ್ನು ಹಾಕಿಕೊಳ್ಳಲು ನಾನು ನನ್ನ ಕೊಠಡಿಯ ಕಡೆ ಬಂದೆ. ಕಾಂತಳು ಎದ್ದು ನನ್ನ ಹಿಂದೆ ಬಂದಳು.

"ಬರುತ್ತೇನೆ ಎಂದೆಯಲ್ಲ; ಈಗೇಕೆ ಬರುವುದಿಲ್ಲ?"

"ನೀವು ಒಬ್ಬರೇ ಹೋಗುವುದಾದರೆ ಬರುತ್ತೇನೆ."

"ಎಲ್ಲರೂ ಸೇರಿ ಇವತ್ತು ಹೋಗಿ ಬರೋಣ!"

"ಆಗುವುದಿಲ್ಲ!"

"ನಾನು ಬರುವುದಾಗಿ ಅವರ ಹತ್ತಿರ ಒಪ್ಪಿಕೊಂಡಿದ್ದೇನೆ."

"ನಿನ್ನೆಯೂ ಹೀಗೇ ಹೇಳಿದಿರಿ"

ಎಂದಳು ಅಳು ಧ್ವನಿಯಲ್ಲಿ.

ಕಾರಿನಲ್ಲಿ ಕುಳಿತ ಮೇಲೆ ನಾನು ಕಾಂತಳ ಮುಖವನ್ನು ನೋಡಿದೆ. ಅವಳು ಅದನ್ನು ಬೇಕೆಂದೇ ಬೇರೆಯ ಕಡೆಗೆ ತಿರುಗಿಸಿಕೊಂಡಳು. ನಾವು ಮೂವರು ಮಾತ್ರ ಸಿನಿಮಾಗೆ ಹೋದೆವು.

೪

ಒಂದು ತಿಂಗಳು, ನೋಡುತ್ತಿದ್ದ ಹಾಗೇ, ಕಾಲದ ಅನಂತಸಾಗರದಲ್ಲಿ ಕರಗಿಹೋಯಿತು. ಇಷ್ಟರಲ್ಲೆ ನಾಲ್ಕೈದು ದಿನ ಸಂಜೆಯ ವೇಳೆ ನಾರಾಯಣಸ್ವಾಮಿಯವರ ಮನೆಯಲ್ಲಿ ಕಳೆದೆ. ಮೊದಲ ಬಾರಿ ನಾನು ಅಲ್ಲಿಗೆ ಹೋದಾಗ, ಅಲ್ಲಿ ಇಬ್ಬರು ಸೋಮಾರಿಗಳು ಇರುವುದಾಗಿ ಹೇಳಿದೆ ನಲ್ಲವೆ? ಹಾಗೆ ಹೇಳಿದ್ದು ಶುದ್ಧ ತಪ್ಪು. ಅಲ್ಲಿರುವುದು ಒಬ್ಬರೇ ಸೋಮಾರಿ–ಅವರೇ ಹಿರಿಯರು ನಾರಾಯಣಸ್ವಾಮಿ!

ಈ ಒಂದು ತಿಂಗಳ ಸಹವಾಸದಲ್ಲಿ, ನಾರಾಯಣಸ್ವಾಮಿಯವರಲ್ಲಿ ನಾನು ಆರಂಭದಲ್ಲಿ ಕಂಡ ನ್ಯೂನತೆಯನ್ನು ಸಂಪೂರ್ಣವಾಗಿ ಮರೆತುಬಿಟ್ಟೆ. ಅವರ ಸ್ವಭಾವ ನಾನು ನಿರೀಕ್ಷಿಸಿದುದಕ್ಕಿಂತಲೂ ಮಧುರವಾಗಿತ್ತು. ಪ್ರಸನ್ನ ವದನರಾಗಿ ಮಾತನಾಡಿಸಿ, ಉಪಚರಿಸುತ್ತಿದ್ದರು; ಯುವಕರಂತೆ ನನ್ನೊಡನೆ ಸಹಜವಾಗಿ ನಡೆದುಕೊಳ್ಳುತ್ತಿದ್ದರು.

ಲಲಿತಳು ಸೋಮಾರಿಯಲ್ಲ. ಮನೆಯ ನಿರ್ವಹಣೆಯೆಲ್ಲವೂ ಅವಳದೇ ಆಗಿತ್ತು. ತೋಟದ ಮಾಲಿ ಸುಬ್ಬನಿಂದ ಹಿಡಿದು ಮನೆಯ ಯಜಮಾನ ನಾರಾಯಣಸ್ವಾಮಿಯವರೆಗೆ, ಎಲ್ಲರೂ ಲಲಿತಳ ಬಳಿ ಸಮಾಲೋಚಿಸಿದ ನಂತರವೇ ಯಾವ ಕಾರ್ಯವನ್ನಾದರೂ ಮಾಡಲು ತೊಡಗುತ್ತಿದ್ದರು. ನಾರಾಯಣಸ್ವಾಮಿಗೆ ಅವಳೊಡನೆ ಕಲೆತು ಯೋಚಿಸಿ ಮಾಡುವಂಥ ಕೆಲಸ ವಾದರೂ ಏನಿದೆ ಎನ್ನುವಿರೇನು?

"ಕಲೆಕ್ಟರಿಗೆ ವರ್ಗವಾಗಿದೆ; ಔತಣಕ್ಕೆ ಕರೆದಿದ್ದಾರೆ. ಯಾವ ಬಟ್ಟೆ ಹಾಕಿಕೊಳ್ಳಲಿ?"

—ಎಂದು ಕೇಳುತ್ತಿದ್ದರು.

"ಪಿತ್ರಾರ್ಜಿತ ಆಸ್ತಿಯ ಮೇಲೆ ಹೆಣ್ಣುಮಕ್ಕಳಿಗಿರುವ ಪಾಲಿನ ಹಕ್ಕನ್ನು ಖಂಡಿಸಿ 'ಹಿಂದು' ಪತ್ರಿಕೆಯಲ್ಲಿ ಒಂದು ಲೇಖನ ಬಂದಿದೆ ಅದನ್ನು ಪ್ರತಿಭಟಿಸಿ ಬರೆದುಹಾಕಲೇ ?"

—ಎನ್ನುತ್ತಿದ್ದರು.

"ಈಚೆಗೆ ಬಂದಿರುವ ಹೊಸ ಮಾದರಿಯ 'ಮಾರಿಸ್' ನೋಡುವು ದಕ್ಕೆ ಅಂದವಾಗಿದೆ. ಹೇಗೂ ನಮಗಿನ್ನೊಂದು ಕಾರು ಬೇಕಾಗಿದೆ. ಅದನ್ನು ಕೊಳ್ಳೋಣವೇ ?"

—ಎನ್ನುವರು.

ಎಲ್ಲದಕ್ಕೂ ಲಲಿತಳ ಉತ್ತರವೇ ಕೊನೆಯ ತೀರ್ಪು.

ಆ ಮನೆಯನ್ನು ಕುರಿತು ಇನ್ನೂ ಸ್ವಲ್ಪ ವಿವರಗಳನ್ನು ಅರಿತು ಕೊಂಡೆ. ಲಲಿತಳನ್ನು ಚಿಕ್ಕ ವಯಸ್ಸಿನಿಂದಲೂ ಸಾಕಿ ಸಲಹಿದ ಅವಳ ಮಾವ ಮತ್ತು ಅತ್ತೆ ಅದೇ ಮನೆಯಲ್ಲೇ ಇದ್ದರು. ಮಾವ ರಾಮಯ್ಯನಿಗೆ ಯಾವಾಗಲೂ ಹೊರಗಿನ ಕೆಲಸ ಕಾರ್ಯಗಳಲ್ಲೇ ಸರಿಹೋಗುತ್ತಿತ್ತು. ಸುತ್ತುಮುತ್ತಲಿನಲ್ಲಿದ್ದ ಹೊಲಗದ್ದೆಗಳನ್ನು ನೋಡಿಕೊಳ್ಳುತ್ತಿದ್ದ ವೇಳೆಯನ್ನು ಬಿಟ್ಟು, ಮನೆಯಲ್ಲಿದ್ದಾಗ ಅವರು ಸುಮ್ಮನಿರುತ್ತಿರಲಿಲ್ಲ. ಯಾವುದಾದರೂ ಮನೆಯ ಲೆಕ್ಕಪತ್ರಗಳನ್ನು ತಿರುವಿಹಾಕುತ್ತಿದ್ದರು. ಹೊಲ, ಗದ್ದೆಗಳು, ಗಡ್ಡೆ ಗೆಣಸು, ಲೆಕ್ಕದ ಪುಸ್ತಕಗಳು, ಇವನ್ನು ಬಿಟ್ಟು ಅವರಿಗೆ ಇನ್ನು ಯಾವುದರಲ್ಲಿಯೂ ಆಸಕ್ತಿಯಿದ್ದ ಹಾಗೆ ಕಾಣಲಿಲ್ಲ. ಅವರು ಬಹಳ ಕಾಲ ದಿಂದಲೂ ಈ ಮನೆಯ ಕರಣಿಕ. ಆ ಸಂಬಂಧದ ಮೂಲಕವೇ ಲಲಿತಳು ನಾರಾಯಣಸ್ವಾಮಿಯನ್ನು ಮದುವೆಯಾದಳಂತೆ. ಅವಳನ್ನು ಮದುವೆ ಮಾಡಿಕೊಟ್ಟು, ಅವರೂ ಇಲ್ಲಿ ಬಂದು ತಳವೂರಿದರು. ಆಮೇಲೂ ತನ್ನ ಕರಣಿಕ ಕೆಲಸವನ್ನು ರಾಮಯ್ಯ ಬಿಡಲಿಲ್ಲ.

ಇನ್ನು ಅವರ ಹೆಂಡತಿ ನಾಗಮ್ಮ: ಮೊದಲನೇ ದಿನ ನಾನು ಬಾಗಿಲ ಬಳಿ ಸಂಧಿಸಿದೆನೇ ಅವರು. ನಾನು ನೋಡಿದಾಗಲೆಲ್ಲಾ ಅವರು ಜರಿಯಂಚಿನ ರೇಶ್ಮೆ ಸೀರೆಯನ್ನೇ ಉಟ್ಟಿರುತ್ತಿದ್ದರು. ಹಣೆಯ ತುಂಬ

ಕುಂಕುಮ, ತಲೆಯ ತುಂಬ ಹೂವು ಯಾವಾಗಲೂ ಇರುತ್ತಿತ್ತು. ಆಕೆಯ ಗಂಟಲು ಅಧಿಕಾರ ಧೋರಣೆಯಲ್ಲಿ ಕೆಲಸಗಾರರ ಮಧ್ಯೆ, ಅಡಿಗೆಮನೆಯಲ್ಲೋ ಅಥವಾ ಮನೆಯ ಬೇರೆ ಕಡೆಗಳಲ್ಲೋ ಕೇಳಿಬರುತ್ತಿತ್ತು. ಅದೇ ಅಧಿಕಾರ ಧೋರಣೆ ಮತ್ತು ದರ್ಪವು ಅವರ ಗಂಡ ರಾಮಯ್ಯನೊಡನೆ ಮಾತನಾಡು ವಾಗಲೂ ಇರುತ್ತಿತ್ತು.

ಅವರ ದೃಷ್ಟಿ ನನ್ನ ಮೇಲೆ ಬೀಳುವಾಗೆಲ್ಲಾ ನನಗೆ ಹೇಗೋ ಅನಿಸುತ್ತಿತ್ತು. ಇಷ್ಟವಿಲ್ಲದ ಅತಿಥಿಯನ್ನು ಮನೆಯ ಒಡತಿ ನೋಡು ವಂತೆ ನೋಡಿದರು.

ಲಲಿತಳ ಅತ್ತಿಗೆ ಹೆಣ್ಣುಮಗುವೊಂದಿತ್ತು. ಆರು ಏಳು ವರ್ಷಗಳಿರ ಬಹುದು. ಹೆಸರು ಲಕ್ಷ್ಮಿ. ಶಾಲೆಯಲ್ಲಿ ಹೇಳಿಕೊಡುವ ಪಾಠಗಳನ್ನು ಮಾತ್ರ ಮರೆತುಬಿಡುತ್ತಿದ್ದಳು. ಆದರೆ ಅವಳು ಅಲ್ಲಿ ಕಲಿತು ಬಂದು ಹಾಡುತ್ತಿದ್ದ ಹಾಡುಗಳೂ, ಆಡುತ್ತಿದ್ದ ಆಟಗಳೂ ಮನೆಯನ್ನೇ ಅಲುಗಾಡಿಸಿ ಬಿಡುತ್ತಿದ್ದವು.

ವಾರದ ಹಿಂದೆ ಒಂದು ಸಂಜೆ ನಾನು ಅಲ್ಲಿಗೆ ಹೋದಾಗ, ತೋಟದ ಮಧ್ಯೆಯಿದ್ದ ಮಂಟಪದಲ್ಲಿ ಲಲಿತಳು ಒಂದು ಹೊಲಿಗೆ ಯಂತ್ರವನ್ನಿಟ್ಟು ಹೊಲಿಯುತ್ತಿದ್ದಳು. ಕೈಯಿಂದ ಸುತ್ತುವ ಸಣ್ಣ ಯಂತ್ರವಲ್ಲ ಅದು. ದರ್ಜಿಯಂಗಡಿಗಳಲ್ಲಿರುವಂತಹ ದೊಡ್ಡ ಯಂತ್ರ. ಪಕ್ಕದ ಮೇಜಿನ ಮೇಲೆ ಕತ್ತರಿಸಲ್ಪಟ್ಟ ಬಟ್ಟೆಗಳು, ಕತ್ತರಿ, ನೂಲಿನ ಉಂಡೆ ಮೊದಲಾದವು ಇದ್ದವು. ಮೇಜಿಗೆ ಆ ಕಡೆಯಿದ್ದ ಸೋಫಾದಲ್ಲಿ ಒರಗಿಕೊಂಡು ನಾರಾಯಣಸ್ವಾಮಿ ಯವರು ಕವಿಮಣಿ ದೇಸಿಕ ವಿನಾಯಕಂ ಪಿಳ್ಳೈಯವರು ಬರೆದ 'ಏಷ್ಯದ ಜ್ಯೋತಿ'ಯನ್ನು ಓದುತ್ತಿದ್ದರು.

ನಾನು ಅಲ್ಲಿಗೆ ಹೋದ ತಕ್ಷಣ ಅವರವರ ಕೆಲಸಗಳನ್ನು ಹಾಗೇ ಹಾಕಿ ಬಿಟ್ಟರು. ಆಳನ್ನು ಕರೆದು ಹೊಲಿಗೆ ಯಂತ್ರವನ್ನು ಒಳಗಿಡಲು ಹೇಳಿದಳು ಲಲಿತ.

'ಏಷ್ಯದ ಜ್ಯೋತಿ'ಯನ್ನು ಕೆಳಗಿಟ್ಟು ಕನ್ನಡಕವನ್ನು ತೆಗೆದು ಒರೆಸುತ್ತಾ ನನ್ನನ್ನು ನೋಡಿದರು ನಾರಾಯಣಸ್ವಾಮಿ.

ಲಲಿತಳು ಹೊಲಿಯುತ್ತಿದ್ದ ಅಂಗಿಯನ್ನು ಕಂಡು ಆಶ್ಚರ್ಯವಾಯಿತು. ಹೊಲಿಯುತ್ತಿದ್ದುದು ಅವಳ ಕುಪ್ಪಸವೋ, ಅವಳ ತಂಗಿಯ ಲಂಗವೋ ಆಗಿದ್ದರೆ ನನಗೆ ಆಶ್ಚರ್ಯವಾಗುತ್ತಿರಲಿಲ್ಲ. ನಾರಾಯಣಸ್ವಾಮಿ ಹಾಕಿ ಕೊಳ್ಳುವುದಕ್ಕಾಗಿ ಬಿಳಿಯ ಸಿಲ್ಕ್ ಬಟ್ಟೆಯಲ್ಲಿ ಒಂದು ಅಂಗಿಯ ಬಹು ಭಾಗವನ್ನು ಹೊಲಿದು ಮುಗಿಸಿದ್ದಳು.

"ಆಶ್ಚರ್ಯವಾಗಿ ನೋಡುತ್ತೀರೇ! ಈ ಆರು ತಿಂಗಳಿಂದ ನನಗೆ ಎಲ್ಲಾ ಉಡುಪುಗಳನ್ನೂ ಲಲಿತಳೇ ಹೊಲಿದು ಕೊಡುತ್ತಿದ್ದಾಳೆ. ಇಷ್ಟು ಖಚಿತವಾಗಿ ನಾನು ಇದುವರೆಗೆ ಅಂಗಿಯನ್ನು ಹಾಕಿದ್ದೇ ಇಲ್ಲ"

—ಎಂದರು ಹೆಮ್ಮೆಯಿಂದ ನಾರಾಯಣಸ್ವಾಮಿ.

"ಯಾವುದರಲ್ಲೂ ಇವರಿಗೆ ಮಿತಿಯೆನ್ನುವುದಿಲ್ಲ. ಇನ್ನು ನನ್ನನ್ನು ಹೊಗಳಿ ಮಾತನಾಡುವುದೆಂದರೆ ಕೇಳಬೇಕೇನು?"

—ಎಂದಳು ಲಲಿತ.

"ಹಲವು ವರ್ಷಗಳ ಅನುಭವವುಳ್ಳ ದರ್ಜಿಯೂ ಹೊಸದಾಗಿ ಕಲಿತ ಲಲಿತಳ ಹತ್ತಿರ ಬಂದು ಪಾಠ ಕಲಿಯಬೇಕು. ಲಲಿತಳನ್ನು ಏನೆಂದು ತಿಳಿದಿರಿ. ಅವಳ ಕೈಚಳಕವೆಲ್ಲವನ್ನೂ ನೀವು ಕಂಡಿಲ್ಲ!"

ಲಲಿತಳ ಬಗ್ಗೆ ನಾರಾಯಣಸ್ವಾಮಿಯವರಿಗಿದ್ದ ಪ್ರೀತ್ಯಾಭಿಮಾನ ಗಳನ್ನು ಕಂಡು ನನಗೆ ಹೆಮ್ಮೆಯೆನಿಸಿತು. ಆಳು ಯಂತ್ರವನ್ನು ಎತ್ತಿಕೊಂಡು ಒಳಗೆ ಹೋದನು. ಲಲಿತ ಅಲ್ಲಿ ಬಿದ್ದ ಬಟ್ಟೆಯ ಚೂರನ್ನು ಶೇಖರಿಸಿದಳು.

ನಾರಾಯಣಸ್ವಾಮಿ ನನ್ನನ್ನು ಕರೆದುಕೊಂಡು, ತೋಟದ ಕಡೆಗೆ ಇದ್ದ ಮಹಡಿಯ ಮೆಟ್ಟಿಲುಗಳನ್ನು ಹತ್ತಿ ಮೇಲಕ್ಕೆ ನಡೆದರು. ಮಹಡಿ ಯಲ್ಲಿ ಹಲವು ಕೊಠಡಿಗಳಿದ್ದುವು. ಎಲ್ಲಿ ನೋಡಿದರೂ ಹಲವು ದೇಶದ ಕಲಾವಿದರು ಚಿತ್ರಿಸಿದ ಭಿತ್ತಿಚಿತ್ರಗಳು ಇದ್ದುವು. ನಾರಾಯಣಸ್ವಾಮಿ ಯವರ ಕಲಾಭಿರುಚಿಯನ್ನು ಕಂಡು ನನಗೆ ಸಂತೋಷವಾಯಿತು.

"ಇದೇ ಲಲಿತಳ ಕೋಣೆ: ಅಪ್ಪಣೆಯಿಲ್ಲದೆ ಒಳಗೆ ಹೋಗಲು ನನಗೆ ಮಾತ್ರ ಅನುಮತಿಯಿದೆ"

—ಎಂದು ಹೇಳಿಕೊಂಡೇ ಬಲಗಡೆಗೆ ಇದ್ದ ಒಂದು ಕೋಣೆಯೊಳಗೆ ಹೊಕ್ಕರು.

ಆ ಕೋಣೆಯಲ್ಲಿ ಮೇಜಿನ ತುಂಬ ಪುಸ್ತಕಗಳು ಜೋಡಿಸಲ್ಪಟ್ಟಿತ್ತು. ಅವನ್ನು ತೆಗೆದು ನೋಡಿದೆ. ಅವು ಅನೇಕವಾಗಿ ಮಹಿಳೆಯರ ಮುನ್ನಡೆಯನ್ನು ಕುರಿತ ಪುಸ್ತಕಗಳಾಗಿ ಕಂಡುವು. ಮಹಾತ್ಮ ಗಾಂಧಿ ಬರೆದ 'ಮಹಿಳೆಯರಿಗೆ,' ತಿರು. ವಿ. ಕ. ರವರ 'ಹೆಣ್ಣಿನ ಹಿರಿಮೆ,' ಇನ್ನೂ ಇತರ ಬರಹಗಾರರ 'ನಮ್ಮ ನಾಡಿನ ಮಹಿಳೆಯರು,' 'ರಷ್ಯಾದಲ್ಲಿ ಮಹಿಳೆಯರು,' 'ಕೈಗಾರಿಕೆ ಮತ್ತು ಮಹಿಳೆಯರು' ಮುಂತಾದ ಗ್ರಂಥಗಳೇ ಕಂಡವು.

"ಈ ಮನೆಗೆ ಬೇಕಾದ ಎಲ್ಲಾ ಬಟ್ಟೆಗಳನ್ನೂ,—ಕೆಲಸಗಾರರ ಮಕ್ಕಳಿಗೂ ಸಹ ಲಲಿತಳೇ ಹೊಲಿದು ಕೊಡುತ್ತಾಳೆ"

—ಎಂದರು ನಾರಾಯಣಸ್ವಾಮಿ.

ಕೊಠಡಿಯ ಮೂಲೆಯೊಂದರಲ್ಲಿ ಅಗಲವಾದ ಪೆಟ್ಟಿಗೆಯ ಮೇಲೆ, ಕೈಯಿಂದ ಹೆಣೆದ ಪರದೆಯ ಬಟ್ಟೆಗಳೂ, ವಿವಿಧ ಬಣ್ಣಗಳಲ್ಲಿ ಹೂಗೆಲಸವನ್ನು ಮಾಡಿದ ದಿಂಬಿನ ಚೀಲಗಳೂ, ಕೈಚೀಲಗಳೂ ಬಿದ್ದಿದ್ದುವು. ತಿರುಕ್ಕುರಳ್, ಭಗವದ್ಗೀತೆ, ಭಾರತಿಯವರ ಕವಿತೆಗಳು ಮುಂತಾದವುಗಳಿಂದ ಕೆಲವು ಸಾಲುಗಳನ್ನು ಆರಿಸಿ, ಅವನ್ನು ಸುಂದರವಾಗಿ ಬರೆದು ಗೋಡೆಗಳ ಮೇಲೆ ನೇತುಹಾಕಿದ್ದರು.

**ಪ್ರೀತಿಗೆ ರೂಪವಿಲ್ಲ; ಬಣ್ಣವಿಲ್ಲ; ಅಂತ್ಯವಿಲ್ಲ. ಅದು ಅವಿನಾಶಿ.**

ಈ ಸಾಲುಗಳನ್ನು ಅದೆಷ್ಟೋ ನಾನು ಆ ಕೊಠಡಿಯಲ್ಲಿದ್ದ ಅರ್ಧ ಗಂಟೆಯಲ್ಲಿ ನನ್ನ ಕಣ್ಣುಗಳು ಹಲವು ಸಾರಿ ನೋಡಿದವು. ನಾನೂ ನಾರಾಯಣಸ್ವಾಮಿಯವರೂ ಅಕ್ಕಪಕ್ಕದಲ್ಲಿ ಕುಳಿತೆವು. ಅವರು ಮೇಜಿನ ಮೇಲಿದ್ದ ಫ್ಯಾನ್ ತಿರುಗಿಸಿಬಿಟ್ಟು, ಪಕ್ಕದಲ್ಲಿದ್ದ ರೇಡಿಯೋ ಸ್ಪೀಕರನ್ನು

ತಿರುಗಿಸಿದರು. ಆ ಮನೆಯ ಮಧ್ಯೆ ಒಂದು ರೇಡಿಯೋವನ್ನಿಟ್ಟು ಒಂದೊಂದು ಕೊಠಡಿಯಲ್ಲೂ ಸ್ಪೀಕರ್ ಇಟ್ಟಿದ್ದರು.

ರೇಡಿಯೋವಿನಿಂದ ನಾದಸ್ವರ ಗೀತವು ತುಸು ದೂರದಿಂದ ನುಡಿಸುತ್ತಿರುವ ಹಾಗೆ ಇಂಪಾಗಿ ಕೇಳಿಬಂತು.

"ನನ್ನ ಹಾಗೇ ಅವಳಿಗೂ ಮೃದು ಮಧುರವಾದ ನಾದದಲ್ಲಿ ಹುಚ್ಚು. ಕೊಠಡಿಯಲ್ಲಿ ಅವಳು ಒಬ್ಬಂಟಿಗಳಾಗಿರುವಾಗ, ಒಂದು ಅವಳು ಹಾಡಿಕೊಂಡಿರುತ್ತಾಳೆ; ಅಥವಾ ರೇಡಿಯೋ ಹಾಡುತ್ತಿರುತ್ತದೆ"

—ಎಂದರು ನಾರಾಯಣಸ್ವಾಮಿ.

ಈಗ ಲಲಿತಳೇ ಅಲ್ಲಿಗೆ ಬಂದುಬಿಟ್ಟಳು.

"ಕಾಫಿ ಕುಡಿಯೋಣ ಬನ್ನಿ—ಅಥವಾ ಇಲ್ಲಿಗೇ ತರುವಂತೆ ಹೇಳಲೇ?"

"ಇಲ್ಲಿಗೇ ತಂದುಬಿಟ್ಟರೆ ಕೆಳಗೆ ಇಳಿದು ಹೋಗುವ ಶ್ರಮವು ತಪ್ಪುತ್ತೆ"

—ಎಂದರು ನಾರಾಯಣಸ್ವಾಮಿ.

"ಹಾಗಾದರೆ ಸರಿ"

—ಎಂದು ಹೇಳಿ ಹೋದವಳು, ಕಾಫಿಯನ್ನಷ್ಟೇ ಅಲ್ಲದೆ, ಫಲಹಾರ, ಹಣ್ಣುಗಳನ್ನು ಅವಳೇ ತೆಗೆದುಕೊಂಡು ಬಂದಳು.

"ನೀವು ವೇಳೆ ಕಳೆಯುವುದನ್ನು ನೋಡಲು ತಮಾಷೆಯಾಗಿದೆ"

—ಎಂದೆ.

"ಇದು ವೇಳೆ ಕಳೆಯುವುದಲ್ಲ. ಉದ್ಯೋಗವೆಂದು ಹೇಳಿ. ಪ್ರತಿಯೊಬ್ಬರೂ ಅವರವರ ಬಾಳಿನ ಸುಖ, ಸೌಕರ್ಯಗಳಿಗಾಗಿ ದುಡಿಯಬೇಡವೇ? ಪರಾವಲಂಬನೆಯ ಮನೋಭಾವವು ಎಲ್ಲರಿಗೂ ಬಂದುಬಿಟ್ಟರೆ ಈ ಲೋಕದ ಗತಿಯೇನು?"

—ಎಂದಳು ಲಲಿತ.

"ಲೋಕದ ಗತಿ ಏನಾದರೂ ಸರಿ. ನನ್ನಿಂದ ಮಾತ್ರ ದುಡಿಯು ವುದಕ್ಕೆ ಆಗುವುದಿಲ್ಲ. ಖಂಡಿತ ಆಗುವುದಿಲ್ಲ!"

—ಎಂದರು ನಾರಾಯಣಸ್ವಾಮಿ ನಗುತ್ತಾ.

"ನೀವು ದುಡಿಯುವುದೇ? ಇಷ್ಟು ಹಣವನ್ನೂ, ಕೀರ್ತಿಯನ್ನೂ ಗಳಿಸಿದ್ದೀರಿ. ಇನ್ನು ನೀವು ವಿಶ್ರಾಂತಿ ಪಡೆಯುವ ಕಾಲ. ನಮ್ಮನ್ನು ದುಡಿಯಲು ಹೇಳಿ ನೋಡಿಕೊಂಡಿದ್ದರೆ ಅದೇ ದೊಡ್ಡ ಕೆಲಸ"

—ಎಂದಳು ಲಲಿತ.

"ಹಣವನ್ನೂ ಕೀರ್ತಿಯನ್ನೂ ಗಳಿಸಿದ್ದು ಹಾಗಿರಲಿ. ನಿನ್ನನ್ನು ಹುಡುಕಿಕೊಂಡಿದ್ದೇನಲ್ಲ, ಅದೇ ಒಂದು ದೊಡ್ಡ ವಿಷಯ!"

—ಎಂದರು ನಗುತ್ತಾ.

ಅವಳು ನಾಚಿಕೆಯಿಂದ ಮಾತನಾಡದೆ ಕುಳಿತಿದ್ದಳು. ನಾನು ನನ್ನೊಳಗೇ ನಗಲು ಪ್ರಯತ್ನಿಸಿದೆ. ಇಪ್ಪತ್ತೈದು ವರ್ಷದ ಎಳೆಯ ತರುಣರ ಹಾಗೆ ಅವರು ಅವಳನ್ನು ಪರಿಹಾಸ ಮಾಡುತ್ತಿದ್ದಾರೆ! ಅವಳೂ ಅದನ್ನು ಆನಂದದಿಂದ ಸ್ವೀಕರಿಸುತ್ತಿದ್ದಾಳೆ! ನನಗೆ ಅವರ ಈ ದಾಂಪತ್ಯ ರಹಸ್ಯವು ಸುಲಭವಾಗಿ ಅರ್ಥವಾಗಲಿಲ್ಲ.

"ಕಲಾವಿದರೂ, ಕಲೆಯಲ್ಲಿ ಆಸಕ್ತಿಗೊಂಡವರೂ ಸಹಜವಾಗಿ ಸೋಮಾರಿಗಳಾಗಿರುತ್ತಾರೆ. ಅವರಿಗೆ ಶಾರೀರಕ ಶ್ರಮದಲ್ಲಿ ಆಸಕ್ತಿಯಿಲ್ಲ ವೆನ್ನುತ್ತಾರೆ, ನೀವು ಏನೆನ್ನುತ್ತೀರಿ?"

—ಎಂದರು ನಾರಾಯಣಸ್ವಾಮಿ

"ನಾನು ಅದನ್ನು ನಂಬುವುದಿಲ್ಲ"

—ಎಂದೆ.

"ಕಲೆಯೋ ಬೇರೆ, ಜೀವನವೇ ಬೇರೆ ಎಂದು ವಿಂಗಡಿಸಿ ಅವನ್ನು ಅರಿಯಲು ಪ್ರಯತ್ನಿಸುವ ಹುಚ್ಚರ ಮಾತಾಗಿರಬೇಕು ಅದು"

—ಎಂದಳು ಲಲಿತ.

"ಲಲಿತಳ ತೀರ್ಪನ್ನು ನಾನು ಯಾವಾಗಲೂ ಗೌರವಿಸುತ್ತೇನೆ"

—ಎಂದರು ನಾರಾಯಣಸ್ವಾಮಿ.

ಅಂದು ನಾನು ಅವರ ಮನೆ ಬಿಟ್ಟು ಹೊರಗೆ ಬರುವಾಗ ಲಲಿತಳ ಅತ್ತೆ ಪಕ್ಕದ ಕೊಠಡಿಯಲ್ಲಿ ಮಾತನಾಡುವುದು ನನಗೆ ಕೇಳಿಸಿತು.

"ಲಲಿತಳಿಗೆ ಇಷ್ಟು ಹೊತ್ತು ಮಹಡಿಯಲ್ಲಿ ಏನು ಕೆಲಸ? ಸ್ವಲ್ಪವಾದರೂ ರೀತಿ, ನೀತಿ ಬೇಡವೇ? ಮೂರನೆಯ ಮನುಷ್ಯ ಯಾರೋ ಬಂದಿರುವಾಗ ಹೀಗೆ ಅವಳು ಹೋಗಿ ಅಲ್ಲಿ ನಿಲ್ಲುವುದೇ?"

—ಎಂದರು.

"ನೀನು ಸ್ವಲ್ಪ ಹೊತ್ತು ಸುಮ್ಮನಿರು"

—ಎಂದು ರಾಮಯ್ಯ ಅವಳನ್ನು ಬೇಡಿಕೊಳ್ಳುತ್ತಿದ್ದರು.

ಆ ಕ್ಷಣದಲ್ಲಿ ನನಗೆ 'ನೀವು ಖಂಡಿತ ಮಂಗಳವಾರ ಬರಬೇಕು' ಎಂದು ಲಲಿತಳು ಹೇಳಿ ಕಳುಹಿಸಿದ್ದು, 'ಬರದೇ ಹೋದರೆ ನಾವೇ ಅಲ್ಲಿಗೆ ಬಂದು ಬಿಡುತ್ತೇವೆ!' ಎಂದು ಮಗುವಿನ ಹಾಗೆ ನಾರಾಯಣಸ್ವಾಮಿ ಹೇಳಿದ್ದುದು ಜ್ಞಾಪಕಕ್ಕೆ ಬಂತು.

ಮಂಗಳವಾರ ಬಂತು. ಅಂದು ಬೆಳಗ್ಗೆಯೇ ನನ್ನ ಹಳೆಯ ಮಿತ್ರ ಸ್ವಾಮಿನಾಥ ನನ್ನಲ್ಲಿಗೆ ಬಂದ. ಅವನ ಸ್ವಗ್ರಾಮ ತಂಜಾವೂರಿನ ಕಡೆಯಿತ್ತು. ಅವನಿಗೆ ಇಬ್ಬರು, ಮೂವರು ಅಣ್ಣಂದಿರಿದ್ದರು. ಅವರೆಲ್ಲರೂ ಮದುವೆಯಾಗಿ, ತಮ್ಮ ಕೆಲಸಕಾರ್ಯಗಳಲ್ಲಿ ನಿರತರಾಗಿದ್ದರು. ಸ್ವಾಮಿನಾಥನೇ ಕೊನೆಯ ಮಗ. ಬಿ. ಎ. ವರೆಗೆ ಓದಿಬಿಟ್ಟು, ಒಂದು ಕೆಲಸಕ್ಕೂ ಹೋಗದೆ, ಯಾರ ಮಾತನ್ನೂ ಕೇಳದೆ, ಊರೂರು ಅಲೆಯುತ್ತಿದ್ದನು. ಶಾಲೆಯಲ್ಲಿ ನಾವು ಒಟ್ಟಿಗೆ ಓದಿದೆವು. ಓದು ಮುಗಿದ ಬಳಿಕ ನಾವು ಅಗಲಿದೆವು. ಎರಡು ತಿಂಗಳಿಗೊಂದು ಸಲ ಯಾವ ಊರಿನಿಂದಲಾದರೂ ನನ್ನ ಕತೆಗಳನ್ನೋದಿ ಕಾಗದ ಬರೆಯುತ್ತಿದ್ದ. ಕಾಗದದಲ್ಲಿರುವ ವಿಳಾಸವೆಲ್ಲವೂ ಆಯಾ ಊರಿನಲ್ಲಿರುವ ಯಾವುದಾದರೂ ಹೋಟೆಲಿನ, ಕೊಠಡಿಯ ವಿಳಾಸವಾಗೇ ಇರುತ್ತಿತ್ತು. ಒಂದೇ ಕಡೆ ಅವನು ಇದ್ದಿದ್ದೇ ಇಲ್ಲ.

ಯಂತ್ರ ಸಾಮಗ್ರಿಗಳ ಮಾರಾಟದಲ್ಲಿ ಅವನಿಗೆ ಬೇಕಾದಷ್ಟು ಹಣ

ಬಂತು. ಆದರೆ ಅವನೂ ಯಂತ್ರದ ಹಾಗೇ ಬಾಳಿದನು. ಹಣ ಗಳಿಸಲು ತಿಳಿದ ಹಾಗೆ ಅವನಿಗೆ ವ್ಯಯ ಮಾಡುವ ಕ್ರಮ ತಿಳಿಯದಾಯಿತು. ಯಾವಾಗಲೂ ಸಂಪಾದನೆಗೆ ಮೀರಿದ ಖರ್ಚು. ಆ ಖರ್ಚು ಒಳ್ಳೆಯದರ ಕಡೆಗೆಂದೂ ಹೇಳುವುದಕ್ಕಿಲ್ಲ. ಅವನ ಕಾಗದಗಳನ್ನು ನೋಡುವಾಗ, ಅವನು ಇಳಿದಿರುವ ಹೋಟಲಿನ ಜೀವನ ಜ್ಞಾಪಕಕ್ಕೆ ಬರುತ್ತಿತ್ತು. ನನಗೆ ಜುಗುಪ್ಸೆಯಾಗಿ ಸಂಕಟಗೊಳ್ಳುತ್ತಿದ್ದೆ. ಹೆಣ್ಣಿನ ವಿಷಯದಲ್ಲಿ ಅವನು ಅಳತೆ ಮೀರಿ ಹಣ ದುಂದುಮಾಡುತ್ತಾನೆಂದು ಅರಿತೆ.

ಶಾಲೆಯಲ್ಲಿ ಓದುತ್ತಿದ್ದಾಗ ಅವನು ಹೀಗೆಲ್ಲಾ ಇರಲಿಲ್ಲ. ಜನರ ಸಂಕಟಗಳನ್ನು ಕುರಿತೇ ಯಾವಾಗಲೂ ಯೋಚಿಸುತ್ತಿದ್ದನು; ಬಡವರಿಗಾಗಿಯೂ, ಅಬಲೆಯರಾದ ಹೆಣ್ಣುಮಕ್ಕಳಿಗಾಗಿ ತಾನು ಜೀವಮಾನವೆಲ್ಲಾ ದುಡಿಯುವುದಾಗಿ ಹೇಳುತ್ತಿದ್ದನು. ದೇಶದ ಕ್ಷಾಮಡಾಮರಗಳನ್ನು ನಿರ್ಮೂಲ ಮಾಡಲು ಯೋಜನೆಗಳನ್ನು ಸಿದ್ಧಗೊಳಿಸುತ್ತಿದ್ದನು. ಇಷ್ಟೆಲ್ಲಾ ಉದಾತ್ತಧ್ಯೇಯಗಳನ್ನು ಹೊಂದಿದ್ದವನು ಈ ರೀತಿ ನಡತೆ ತಪ್ಪಿ ಪ್ರಪಾತಕ್ಕೆ ಬಿದ್ದಿದ್ದಾನೆಂದರೆ ನಾನು ನಂಬಲಾರದೆ ಹೋದೆ.

"ಶ್ರೀಮಂತರನ್ನು ಲೂಟಿಮಾಡಿ, ಅಪಾರ ಹಣದೊಂದಿಗೆ, ಬಡವರ ಬವಣೆಗಳನ್ನು ನಿವಾರಿಸುವ ಯೋಜನೆಗಳೊಂದಿಗೆ ಒಂದು ದಿನ ನಿನ್ನನ್ನು ಬಂದು ಕಾಣುತ್ತೇನೆ"

—ಎಂದು ಹಿಂದೆ ನನಗೆ ಹೇಳಿ ಹೋಗಿದ್ದನು. ಆದರೆ ಆ ರೀತಿಯಾಗಿ ಈಗ ಅವನಿಲ್ಲಿಗೆ ಬರಲಿಲ್ಲವೆಂಬುದು ಅವನು ಬಂದ ವೇಷದಲ್ಲೇ ಗೊತ್ತಾಗುತ್ತಿತ್ತು. ಅವನ ಹಾಸಿಗೆ, ಪೆಟ್ಟಿಗೆಯನ್ನು ಹೊತ್ತು ತಂದವನಿಗೆ ನನ್ನ ಅಂಗಿಯ ಜೇಬಿನಲ್ಲಿ ಕೈಬಿಟ್ಟು ಚಿಲ್ಲರೆ ತೆಗೆದು ಕೊಟ್ಟನು.

ಅಂದು ಮಧ್ಯಾಹ್ನ ಅವನು ಹೇಳಿದನು,

"ಸೋಮು, ಊರೂರಿನಲ್ಲಿ ಅಲೆದು ನಾನು ದಣಿದು ಹೋದೆ. ಯಾಂತ್ರಿಕ ಜೀವನ ನನಗೆ ಬೇಸರವಾಗಿದೆ. ನಿನ್ನ ಬಳಿ ನೆಮ್ಮದಿಯಾಗಿ ಕೆಲವು ದಿನಗಳನ್ನು ಕಳೆಯಬೇಕೆಂದಿದ್ದೇನೆ. ಹಣದ ಚಿಂತೆ ನಿನಗೆ ಬೇಡ,

ಈ ಊರಿನಲ್ಲಿ ಇವತ್ತೇ ಹಣ ಗಳಿಸಲು ನನಗೆ ಗೊತ್ತು. ನಾನು ಹೇಳುವುದು ಅರ್ಥವಾಯಿತೇ ?"

" ಹಣದ ಮಾತು ಹಾಗಿರಲಿ. ನೀನು ಯಾವಾಗಲೂ ನನ್ನ ಬಳಿಯೇ ಇರಬಹುದು. ಆದರೆ ಗುಣವನ್ನು ಮಾತ್ರ ತಿದ್ದಿಕೊಳ್ಳಬೇಕು. ನನ್ನ ಕೊಠಡಿ, ನೀನು ಪದ್ಧತಿಯಂತೆ ಹೊರ ಊರುಗಳಲ್ಲಿ ಇಳಿದುಕೊಳ್ಳುತ್ತಿದ್ದ ಹೋಟೆಲ್ ಕೊಠಡಿಯಲ್ಲವೆಂಬುದು ಗಮನದಲ್ಲಿಟ್ಟುಕೊ."

" ನನಗಷ್ಟು ಗೊತ್ತಿಲ್ಲವೇ ಸೋಮು ಎಲ್ಲವನ್ನೂ ಅರಿತೇ ನಾನು ನಿನ್ನಲ್ಲಿಗೆ ಬಂದಿರುವುದು. ಕಳೆದು ಹೋದ ದಿನಗಳನ್ನು ನೆನೆದರೆ ನನಗೆ ಹೇಸಿಕೆಯಾಗುತ್ತೆ. ನನ್ನ ಮೇಲೇ ನನಗೆ ತಿರಸ್ಕಾರ ಹುಟ್ಟುತ್ತೆ. ನನ್ನ ಮನಸ್ಸು ನನ್ನನ್ನು ಚಿತ್ರಹಿಂಸೆ ಮಾಡುತ್ತಿದೆ. ನಿನ್ನ ಹೆಸರಿಗೆ ಕುಂದನ್ನು ತರಲು ನಾನು ಇಲ್ಲಿಗೆ ಬಂದಿಲ್ಲ"

—ಎಂದ ಸ್ವಾಮಿನಾಥ ಪಶ್ಚಾತ್ತಾಪದ ಧ್ವನಿಯಲ್ಲಿ.

ಅವನ ದೀನಸ್ಥಿತಿಯನ್ನು ಕಂಡು ಮಮ್ಮಲ ಮರುಗಿದೆ.

" ಹಾಗಾದರೆ ಸರಿ "

—ಎಂದೆ.

# ೫

ಮಂಗಳವಾರ ಸಂಜೆ ನನಗೆ ನಾರಾಯಣಸ್ವಾಮಿಯವರ ಮನೆಗೆ ಹೋಗುವುದರಲ್ಲಿ ಅಷ್ಟು ಉತ್ಸಾಹವಿರಲಿಲ್ಲ. ಪತ್ರಿಕಾಲಯದಲ್ಲೇ ನಿಂತು ಬಿಡೋಣವೆಂದಿದ್ದೆ. ಆದರೆ ಅಂದು ಅವರು ಹೇಳಿದ ಹಾಗೆ ಖಂಡಿತ ಲಲಿತಳ ಜೊತೆ ಇಲ್ಲಿಗೆ ಬಂದುಬಿಡುತ್ತಾರೆ. ಈಗ ನನ್ನ ಕೊಠಡಿಯಲ್ಲಿ ಸ್ವಾಮಿನಾಥ ನಿದ್ದನು. ಅವನಿಲ್ಲಿರುವುದರಿಂದ ಬರುವ ಮಿತ್ರರೊಂದಿಗೆ ವೇಳೆ ಕಳೆಯು ವುದಕ್ಕೆ ಯಾವ ಆತಂಕವೂ ಇಲ್ಲ. ಆದರೆ ಈ ಸಮಯದಲ್ಲಿ ಕಾಂತಳೂ ಇಲ್ಲಿಗೆ ಬಂದುಬಿಟ್ಟರೆ?

ಕಾಂತಳು ಬಂದುಬಿಟ್ಟರೆ? ಅವಳ ಬರವನ್ನು ಯಾರಿಂದಲೂ ತಡೆ ಗಟ್ಟಲು ಸಾಧ್ಯವಿಲ್ಲ. ಅವಳ ರೀತಿಯನ್ನು ತಿದ್ದಲು ಎಂತಹವರಿಗೂ ಕಷ್ಟ. ಅವಳು ಮಧ್ಯೆ ತಲೆಯಿಟ್ಟು ಮಾತನಾಡಿದಳೆಂದರೆ ಅವಳನ್ನು ನಿಭಾಯಿಸು ವುದು ಕಷ್ಟದ ಕೆಲಸವೆಂಬುದರಲ್ಲಿ ಸಂಶಯವಿಲ್ಲ. ಆಗ ನಾನು ಧರ್ಮಸಂಕಟಕ್ಕೆ ಸಿಲುಕಿ ನರಳಬೇಕಾಗುತ್ತದೆ. ಅದೇಕೋ ನಾನು ನಾರಾಯಣಸ್ವಾಮಿ ಯವರ ಮನೆಯವರ ಹತ್ತಿರ ಅನ್ಯೋನ್ಯವಾಗಿ ಪಳಗುವುದು ಅವಳಿಗೆ ಕಹಿ ಯಾಗಿರುತ್ತಿತ್ತು.

ಆದ್ದರಿಂದ ಬೇರೆ ದಾರಿ ಕಾಣದೆ, ನಾನೇ ಮಿತ್ರರ ಮನೆಗೆ ಹೊರಟೆ.

ಆಗ ತೋಟದಲ್ಲಿ ಲಲಿತಳೊಬ್ಬಳೇ ಇದ್ದಳು. ನಾರಾಯಣಸ್ವಾಮಿ ಯವರು ಅಲ್ಲಿ ಕಾಣಲಿಲ್ಲ. ನಾನಿನ್ನೂ ಹೋದೆನೋ ಇಲ್ಲವೋ ಆಗಲೇ

"ಬನ್ನಿ, ಈಗತಾನೇ ನಿಮ್ಮ 'ಒಂಟಿ ಗುಲಾಬಿ'ಯನ್ನು ಓದಿದೆ. ಆ ಗುಲಾಬಿಯಲ್ಲಿ ಪರಿಮಳವೂ, ಚೆಲುವೂ ತುಂಬಿದೆ; ಆದರೆ...."

—ಎಂದು ಅರ್ಧದಲ್ಲೇ ಮಾತನ್ನು ನಿಲ್ಲಿಸಿದಳು.

"ಹರಿತವಾದ ಮುಳ್ಳೂ ಇದೆ"

—ಎಂದೆ.

"ನಾನು ಹೇಳಬೇಕೆಂದಿದ್ದುದನ್ನು ನೀವೇ ಹೇಳಿಬಿಟ್ಟಿರಿ"

—ಎಂದಳು.

ಹೆತ್ತವರಿಗೆ ತಮ್ಮ ಮಕ್ಕಳನ್ನು ಕುರಿತು ಪ್ರಶಂಸೆಯ ನುಡಿಗಳನ್ನು ಕೇಳುವಾಗ ಬೇರೆಲ್ಲವೂ ಮರೆತು ಹೋಗುವುದಿಲ್ಲವೇ? ನನಗೂ ಹಾಗೇ: ಇತರರು ನನ್ನ ಕತೆಗಳನ್ನು ಹೊಗಳುವಾಗ ಒಂದು ಕ್ಷಣ ನನ್ನನ್ನು ನಾನೇ ಮರೆತುಬಿಡುತ್ತಿದ್ದೆ. ಇದನ್ನು ನೀವು 'ಸ್ವಾಭಾವಿಕ'ವೆಂದರೂ ಸರಿ, ಅಥವಾ ಬರಹಗಾರನ 'ಬಲಹೀನತೆ'ಯೆಂದರೂ ಸರಿಯೆ. ನಾನು ಆಗ ನಾರಾಯಣ ಸ್ವಾಮಿಯವರನ್ನು ಕುರಿತು ಕೇಳುವುದಕ್ಕೆ ಮರೆತೇ ಹೋದೆ.

'ಒಂಟಿ ಗುಲಾಬಿ'ಯಲ್ಲಿ ಬರುವ ಹೆಣ್ಣು ಹೆಚ್ಚಿನ ವಿಚಾರಶೀಲಳಾಗಿರಲಿಲ್ಲ. ಪುಟ್ಟ ಮಗುವಿನ ಹಾಗೆ ಮೃದುಸ್ವಭಾವದ ಮುಗ್ಧೆ. ಅವಳು ಒಳ್ಳೆಯ ಹುಡುಗಿ. ಮಗು ತನ್ನ ಕಣ್ಣಿಗೆ ಆಕರ್ಷಕವಾಗಿ ಕಾಣುವ ಗೊಂಬೆಯ ಮೇಲೆ ತಟ್ಟನೆ ಎಷ್ಟು ಪ್ರೀತಿಯನ್ನು ತೋರುತ್ತದೆ! ಆದರೆ ಆ ಪ್ರೀತಿಯ ವೇಗವು ಯಾವಾಗಲೂ ಹಾಗೇ ಉಳಿದಿರುವುದಿಲ್ಲ ಅಲ್ಲವೇ? ಹಾಗೇ 'ಒಂಟಿ ಗುಲಾಬಿ'ಯಲ್ಲಿ ಬರುವ ಆ ಕಥಾನಾಯಕಿ ಒಬ್ಬ ಯುವಕನ ಮೇಲೆ ಅಳತೆಗೆ ಮೀರಿದ ಪ್ರೀತಿಯನ್ನು ತಾಳುತ್ತಾಳೆ. ಆ ಪ್ರೀತಿಯಿಂದ ಅವನನ್ನು ಮಣಿಸಲು ಬಯಸುತ್ತಾಳೆ. ಆದರೆ ಆ ಯುವಕ ಅವಳನ್ನು ಪ್ರೇಮಿಸುವುದಿಲ್ಲ.

"ನೀವು ಯಾವಾಗಲೂ ನಿಮ್ಮ ಬಗ್ಗೆಯೇ ಬರೆಯುತ್ತೀರೇನು?"

"ಇಲ್ಲ; ಯಾವಾಗಲಾದರು ನನ್ನ ಕುರಿತೂ ಬರೆಯುತ್ತೇನೆ, ಅಷ್ಟೆ. ನನ್ನ ಸುತ್ತಮುತ್ತಲಿರುವವರ ಬಗ್ಗೆಯೂ, ನನಗೆ ತಿಳಿದವರ ಬಗ್ಗೆಯೂ, ನನಗೆ ಸ್ವಲ್ಪವೂ ಪರಿಚಯವಿಲ್ಲದವರ ಬಗ್ಗೆಯೂ ಬರೆಯುತ್ತೇನೆ. ಮಾನವನ ವಿವಿಧ ರೀತಿ, ನೀತಿ ಮತ್ತು ನಡತೆಗಳನ್ನು ಅರಿಯುವ ಮನಸ್ಸಿದ್ದರೆ ಯಾರನ್ನು ಕುರಿತಾದರು ಬರೆಯಬಹುದಲ್ಲವೆ?"

"ಆದರೆ ಇದು ನಿಮ್ಮ ಕತೆಯೇ ಆಗಿದೆ!"

—ಎಂದಳು ಲಲಿತ.

ನಾನು ಸ್ತಂಭಿತನಾದೆ.

"ಇತರರಿಗೆ ನಿಮ್ಮ 'ಒಂಟಿ ಗುಲಾಬಿ'ಯ ಎಸಳೂ ಪರಿಮಳವು ಮಾತ್ರ ಕಾಣುವುದು. ನನಗೆ ಅದರ ಜತೆ ಮುಳ್ಳೂ ಕಾಣುತ್ತಿದೆ. ಆದರೆ ಕಾಂತಳಿಗೆ...."

—ಎಂದು ಮಾತನ್ನು ಅಪೂರ್ಣವಾಗಿ ನಿಲ್ಲಿಸಿದಳು.

ಕಾಂತಳ ಹೆಸರನ್ನು ಕೇಳಿದಾಗ ನನ್ನ ಮನಸ್ಸು ಪುಲಕಿತವಾಯಿತು.

"ಕಾಂತಳಿಗೆ ನಿಮ್ಮ ಕತೆಯಲ್ಲಿರುವ ಮುಳ್ಳುಗಳು ಮಾತ್ರ ಕಾಣುತ್ತದೆ."

ಕೆಲವು ನಿಮಿಷಗಳು ನಾನು ಏನೂ ಮಾತನಾಡಲಿಲ್ಲ.

"ನಿಮಗೆ ನಾನು ಮಾತನಾಡುವುದು ಕಷ್ಟವಾಗಿದೆಯೆ?"

—ಎಂದಳು.

"ಇಲ್ಲ; ನನ್ನ ಸ್ಥಿತಿಯನ್ನು ನೀವು ಅರ್ಥಮಾಡಿಕೊಂಡಿದ್ದೀರಿ ಎಂದು ತಿಳಿಯುತ್ತೇನೆ."

"ಕಾಂತ ನನಗೆ ಚೆನ್ನಾಗಿ ಗೊತ್ತು. ಅವಳು ಚಿನ್ನದಂತ ಹುಡುಗಿ."

"ಅವಳಲ್ಲಿ ನಾನು ಕುಂದೆಣಿಸುತ್ತಿಲ್ಲ. ಆದರೆ ಬರವಣಿಗೆಯ ಮುಸುಕಿನಲ್ಲಿರುವ ಸಾಧಾರಣ ವ್ಯಕ್ತಿಯಾದ ನನ್ನನ್ನು ಅರ್ಥಮಾಡಿಕೊಳ್ಳಲು ಅವಳಿಂದ ಸಾಧ್ಯವಿಲ್ಲ. ನನ್ನ ಬರವಣಿಗೆಯನ್ನು ಓದಿ ರಮಿಸುವ ಎಷ್ಟು ಮಂದಿ ಅದರಲ್ಲಿ ನನ್ನ ಹೃದಯದ ಮಿಡಿತವನ್ನು ಅರಿಯುತ್ತಾರೆ."

"ಎಂದರೂ...."

"ನಿಮಗೆ ಹೇಗೆ ಈ ವಿವರಗಳೆಲ್ಲವೂ ತಿಳಿಯಿತು?"

—ಎಂದು ಕೇಳಿದೆ.

"ನಿನ್ನೆಯೂ ಕಾಂತಳು ಇಲ್ಲಿಗೆ ಬಂದಿದ್ದಳು. ಎಲ್ಲವನ್ನೂ ಹೇಳಿದಳು. ಅವಳು ನಿಮ್ಮನ್ನು...."

ನಾನು ನಿಟ್ಟುಸಿರುಬಿಟ್ಟೆ.

"ನನ್ನಂಥಾ ಒಬ್ಬ ಹುಡುಗಿ ಇಂತಹ ವಿಷಯಗಳನ್ನು ನಿಮ್ಮ ಹತ್ತಿರ ಮಾತನಾಡುವುದು ಕಷ್ಟದ ಕೆಲಸ. ಅದರೂ ನಾನು ನನ್ನ ಗೆಳತಿಗೆ ಸಹಾಯ ಮಾಡಲು ಬಯಸುತ್ತೇನೆ. ನನ್ನನ್ನು ಕುರಿತು ನೀವು ಅನ್ಯಥಾ ಭಾವಿಸುವುದಿಲ್ಲವೆಂಬುದು ನನಗೆ ಗೊತ್ತು."

"ಸದ್ಯಕ್ಕೆ ನಾನು ಮದುವೆಯಾಗಲು ಬಯಸುವುದಿಲ್ಲ."

"ಬೇಕಾದರೆ ಅವಳು ನಿಮಗಾಗಿ ಕಾದಿರುತ್ತಾಳೆ."

"ಅದು ಅವಳಿಂದ ಸಾಧ್ಯವಿಲ್ಲ. ನಾನೂ ಅದನ್ನು ಎದುರುನೋಡ ಲಿಲ್ಲ. ಒಬ್ಬರು ಮತ್ತೊಬ್ಬರ ಸುಖಸಂತೋಷಗಳಿಗಾಗಿ ಬಾಳುವುದರ ಜೊತೆಗೆ, ತಮ್ಮ ಧ್ಯೇಯಗಳಿಗಾಗಿಯೂ ಬಾಳಬೇಕು.

"ಕಲಾವಿದರಾದ ನಿಮಗೆ ಅವಳು ತಕ್ಕವಳಲ್ಲವೇ?"

"ಕಲೆಯ ಹೊರಗಿನ ಮೆರುಗನ್ನು ಕಂಡು ಭ್ರಮಿಸಲು ಎಷ್ಟೋ ಜನರು ಸಿದ್ಧರಾಗಿದ್ದಾರೆ. ತಮ್ಮ ಆನಂದಕ್ಕೂ, ಗೌರವಕ್ಕಾಗಿಯೂ ಕಲಾವಿದನ ಗೆಳೆತನವನ್ನು ಬಯಸುತ್ತಾರೆ. ಆದರೆ ಅವನಿಗೆ ದುಃಖ ಉಮ್ಮಳಿಸಿ ಕಣ್ಣೀರು ಹರಿದೋಡಿದಾಗ ಅವನನ್ನು ಆದರಿಸುವರಾರು? ಮನುಷ್ಯರನ್ನು ನಾನು ದೂರುತ್ತಿಲ್ಲ; ಅವರ ಸ್ಥಿತಿಗತಿಗಳೂ, ಸನ್ನಿವೇಶ ಗಳೂ ಅವರನ್ನು ಹಲವು ವಿಧವಾಗಿ ಮಾರ್ಪಡಿಸುತ್ತವೆ."

ಈ ಸಮಯದಲ್ಲಿ ಲಲಿತಳ ಅತ್ತೆಯ ಮಗಳು ಲಕ್ಷ್ಮಿ ಅಲ್ಲಿಗೆ ಓಡೋಡಿ ಬಂದಳು. ನಮ್ಮಿಬ್ಬರನ್ನೂ ಸ್ವಲ್ಪ ದಿಟ್ಟಿಸಿ ನೋಡಿಬಿಟ್ಟು, ಒಂದು ಮೂಲೆ ಯಲ್ಲಿ ಹೋಗಿ ಕುಳಿತಳು. ಅವಳ ದೃಷ್ಟಿಯ ತೀಕ್ಷ್ಣತೆಯೂ, ಅವಳು ಪಿಳಿಪಿಳಿಯೆಂದು ಕಣ್ಣುಬಿಟ್ಟು ನಮ್ಮನ್ನು ನೋಡುತ್ತಿದ್ದುದನ್ನೂ ಕಂಡು

ನನಗೆ ನಗು ಬಂತು. ಮರಗಳ ರೆಂಬೆಯಲ್ಲಿ ಕುಳಿತು ಕಣ್ಣಿಗೆ ಕಾಣಿಸದೆ ಅಲೆಯುವ ಸಣ್ಣ ಹುಳಗಳನ್ನು ತಿನ್ನುವ ಹಕ್ಕಿಯ ಹಾಗೆ ಅವಳು ಕಂಡಳು.

"ಎಲ್ಲಿ ಅವರು ಇನ್ನೂ ಕಾಣಲಿಲ್ಲ! ಎಲ್ಲಿಗೆ ಹೋದರು?"

—ಎಂದು ನಾರಾಯಣಸ್ವಾಮಿಯವರ ಬಗ್ಗೆ ಕೇಳಿದೆ.

"ಈಗ ಬಂದುಬಿಡುತ್ತಾರೆ. ಅವಸರವಾಗಿ ವಕೀಲರ ಜೊತೆ ಹೊರಗೆ ಹೋಗಿದ್ದಾರೆ. ನಿಮ್ಮನ್ನು ಇಲ್ಲೇ ಇರುವಂತೆ ಕೇಳಿಕೊಂಡಿದ್ದಾರೆ"

—ಎಂದಳು ಲಲಿತ.

ಅವರು ಬರುವವರೆಗೆ ಯಾವುದಾದರೂ ಓದುತ್ತಿರೋಣವೆಂದು ಅಲ್ಲಿದ್ದ ಪತ್ರಿಕೆಗಳನ್ನು ತಿರುವಿಹಾಕತೊಡಗಿದೆ.

"ನೀವು ಭಾವಜೀವಿಗಳಲ್ಲವೇ? ಅವರನ್ನು ಕುರಿತು ನಿಮ್ಮ ಅಭಿಪ್ರಾಯವೇನು?"



—ಎಂದಳು ಲಲಿತ.

ಇದಕ್ಕೆ ನಾನೇನು ಉತ್ತರ ಕೊಡಲಿ?–'ಅವರು ಬಹಳ ಒಳ್ಳೆಯವರು; ಆದರೆ ಅವರದು ಚಪಲ ಚಿತ್ತ. ಇಲ್ಲದಿದ್ದರೆ ಈ ಮುದಿ ವಯಸ್ಸಿನಲ್ಲಿ ಹೀಗೆ ಒಂದು ಎಳೆಯ ತರುಣಿಯನ್ನು ಮದುವೆಯಾಗಬಹುದೆ?' ಎಂದು ನಾನು ಅವಳ ಹತ್ತಿರ ದುಡುಕಿ ಹೇಳಲಾಗುತ್ತದೆಯೆ?

ಅದೇ ಭಾವನೆಯನ್ನು ಬೇರೆ ಮಾತುಗಳಲ್ಲಿ ಹೇಳಿದೆ.

"ಬಹಳ ಒಳ್ಳೆಯವರು. ಭಾವಜೀವಿಗಳು. ತರುಣ ಹೃದಯಿಗಳು. ಗೆಳೆತನಕ್ಕೆ ಇಂತಹ ವ್ಯಕ್ತಿ ಸಿಗುವುದು ದುರ್ಲಭ"

—ಎಂದೆ.

"ಗೆಳೆತನಕ್ಕೆ ಮಾತ್ರವಲ್ಲ; ಬಾಳಿಗೂ ಎಂದು ಹೇಳಿ"

—ಎಂದಳು ಲಲಿತ. ಮತ್ತೆ ಅವಳೇ

"ನಿಮಗೆ ಅರ್ಥವಾಗಲಿಲ್ಲವೇ? ಅವರು ನನ್ನನ್ನು ಮದುವೆಯಾಗಲು ಬಯಸಿದಾಗ ನಾನು ಮನಃಪೂರ್ವಕವಾಗಿ ಮಣಿದೆ. ನಮ್ಮ ಬಾಳಿನಲ್ಲಿ ಯಾವ ಕೊರತೆಯೂ ಇಲ್ಲ. ನಾವು ಸಂತೋಷವಾಗಿ ಬಾಳುತ್ತಿದ್ದೇವೆ.

ಮದುವೆಯ ನಂತರ ನನ್ನ ಗೆಳತಿಯರು ಕೆಲವರು ನನ್ನಲ್ಲಿಗೆ ಬಂದು ನನ್ನ ಸ್ಥಿತಿಗೆ ದುಃಖ ಸೂಚಿಸಿದರು. ಅವರನ್ನು ಚೆನ್ನಾಗಿ ಬೈದು ಕಳುಹಿಸಿದೆ"

—ಎಂದಳು.

"ನಾನೇನು ಹಾಗೆ ತಿಳಿದಿಲ್ಲ. ನನ್ನನ್ನು ಬಯ್ದು ಕಳುಹಿಸುವುದಿಲ್ಲ ತಾನೆ?"

"ನೀವು ನನ್ನ ಬಗ್ಗೆ ಅನುತಾಪಗೊಳ್ಳದಿದ್ದರೆ"

—ಎಂದು ನಕ್ಕಳು.

ಅವಳ ಬಗ್ಗೆ ಅನುತಾಪಗೊಳ್ಳದಿರುವುದು ಹೇಗೆ? ಶೋಕವೇ ಮೂರ್ತಿವೆತ್ತಂತಿರುವ ಅವಳ ಮುಖವನ್ನು ಕಂಡ ಬಳಿಕವೂ, ಅವಳು ತನಗೆ ತಾನೇ ಏರ್ಪಡಿಸಿಕೊಂಡಿರುವ ಬವಣೆಯ ಬಾಳಿನ ರೀತಿಯನ್ನು ಕಂಡ ನಂತರವೂ ಅವಳ ಬಗ್ಗೆ ಅನುತಾಪಗೊಳ್ಳದಿರುವುದಕ್ಕಾಗುತ್ತದೆಯೆ?

"ಇಷ್ಟವಿಲ್ಲದ ಬಾಳು ಎಂದು ಹೇಳುತ್ತಾರಲ್ಲವೆ, ಅದರಲ್ಲಿ ನಿಮಗೆ ಆಸಕ್ತಿಯುಂಟೆ!"

—ಎಂದು ಕೇಳಿದೆ.

"ಶಾಲೆಗೆ ಹೋಗುತ್ತಿದ್ದ ದಿನಗಳಲ್ಲೇ ನನಗೆ ಆಡಂಬರ ಜೀವನವನ್ನು ಕಂಡರೆ ಆಗುತ್ತಿರಲಿಲ್ಲ. ಆಗ ಅದಕ್ಕೆ ಅನುಕೂಲವೂ ಇರಲಿಲ್ಲ. ಈಗ ಅನುಕೂಲವಿದೆ; ಮನಸ್ಸಿಲ್ಲ"

—ಎಂದಳು ಲಲಿತ.

ನನಗೆ ಬ್ಬಾಯಾರಿಕೆಯಾಗಿತ್ತು.

"ಸ್ವಲ್ಪ ನೀರು ತಗೊಂಡು ಬಾ ಲಕ್ಷ್ಮಿ"

—ಎಂದು ಪಕ್ಕದಲ್ಲಿ ಕುಳಿತಿದ್ದ ಮಗುವಿಗೆ ಹೇಳಿದೆ.

"ಊಹ್ಞೂಂ"

—ಎಂದು ತಲೆಯಾಡಿಸಿದಳು.

"ತುಂಟ ಹುಡುಗಿ! ಒಂದು ದಿನವಾದರೂ ಹೇಳಿದ ಮಾತನ್ನು ತಪ್ಪಿದ್ದಿಲ್ಲ. ಇವತ್ತೇನು ಬಂತು ನಿನಗೆ?"

—ಎಂದು ಲಲಿತ ತಾನೇ ನೀರು ತರಲು ಎದ್ದಳು.

"ಇಲ್ಲೇ ಇರಬೇಕೆಂದು ಅಮ್ಮ ಹೇಳಿದಳು. ನೀವು ಮಾತಾಡೋದನ್ನೆಲ್ಲ ಕೇಳಿಕೊಂಡು ಬಂದು ಹೇಳಬೇಕೆಂದು ಹೇಳಿದ್ದಾಳೆ"

—ಎಂದಳು ಲಕ್ಷ್ಮಿ.

ಅದಕ್ಕೆ ಮೇಲೆ ಅವಳನ್ನು ಮಾತನಾಡಗೊಡಲಿಲ್ಲ ಲಲಿತ. ಕೋಪದಿಂದ ಅವಳ ಕೈಹಿಡಿದು ಒಳಕ್ಕೆ ಎಳೆದುಕೊಂಡು ಹೋದಳು. ಅಡಿಗೆ ಮನೆಯಲ್ಲಿ ಲಲಿತಳ ಕೂಗು ಹೆಚ್ಚಾಗಿ ಕೇಳಬರುತ್ತಿತ್ತು. ಆದರೆ ಮರು ನಿಮಿಷದಲ್ಲೇ ಕೈಯಲ್ಲಿ ಬೆಳ್ಳಿಯ ಲೋಟದೊಡನೆ ನಗುಮುಖದಿಂದ ನನ್ನ ಬಳಿ ಬಂದಳು. ನೀರಿಗೆ ಬದಲಾಗಿ ಮಂಜುಗಡ್ಡೆ ಹಾಕಿದ ತಣ್ಣನೆಯ ಷರಬತ್ತು ಬಂತು.

"ನಾನು ನೀರು ತಾನೇ ಕೇಳಿದ್ದು?"

"ಈ ಎರಡು ನಿಮಿಷದಲ್ಲೇ ಈ ಸ್ಥಳವು ಹೆಚ್ಚು ಕಾವುಗೊಂಡಿತಲ್ಲವೇ?"

—ಎಂದು ಅವಳು ನಗಲು ಪ್ರಯತ್ನಿಸಿದಳು. ನಾನೂ ನಗಲು ಪ್ರಯತ್ನಿಸಿದೆ. ಆದರೆ ಇಬ್ಬರಿಂದಲೂ ನಗಲು ಆಗಲಿಲ್ಲ.

ಲಲಿತಳು ನನ್ನ ಬಳಿ ಹೆಚ್ಚು ಉತ್ಸಾಹದಿಂದ ಕವಿತೆಗಳ ಬಗ್ಗೆಯೂ ಕವಿವರ್ಯರ ಕುರಿತೂ ಮಾತನಾಡಿದಳು. ಕತೆಗಾರರು, ಸಿನಿಮಾದವರು, ರಾಜಕಾರಣಿಗಳು, ಪ್ರಪಂಚ ಯುದ್ಧ ಈ ರೀತಿಯಾಗಿ ಎಲ್ಲ ವಿಷಯಗಳ ಬಗ್ಗೆಯೂ ಮಾತನಾಡಿ ನನ್ನ ಮನಸ್ಸನ್ನು ಯಾವುದಾದರೂ ಒಂದರಲ್ಲಿ ತಲ್ಲೀನಗೊಳ್ಳುವಂತೆ ಪ್ರಯಾಸಪಟ್ಟಳು. ಅವಳ ಈ ಶ್ರಮವನ್ನರಿತ ನಾನೂ ಅವಳನ್ನು ಸಂತಯಿಸಲು ಅವಳ ಮಾತುಗಳಲ್ಲಿ ಆಸಕ್ತಿ ತೋರಲು ಪ್ರಯತ್ನಿಸಿದೆ. ಆದರೂ ಈ ಕಣ್ಣುಮುಚ್ಚಾಟ ನಮ್ಮಿಬ್ಬರಿಗೂ ಗೊತ್ತಿಲ್ಲದೆ ಇಲ್ಲ.

ಈ ಸಮಯದಲ್ಲಿ ಹಿಂದಿನಿಂದ ಒಂದು ಧ್ವನಿ ಕೇಳಿಸಿತು.

" ಸಂಪಾದಕರೆ, ನಮಸ್ಕಾರ ಸಾರ್ !"

ಹಿಂದಿರುಗಿ ನೋಡಿದೆ.

ಸೀತಾರಾಮನು ಜೋಡಿಸಿದ ಕೈಗಳನ್ನು ತೆಗೆಯದೆ ಕಣ್ಣುಗಳಲ್ಲೇ ನಗುತ್ತಾ ನಿಂತಿದ್ದನು.

" ನಮಸ್ಕಾರ, ಕೂತುಕೊಳ್ಳಿ "

—ಎಂದು ಹೇಳಿದೆ.

" ಮಾವ ನಿಮಗೆ ಮೊದಲೇ ಗೊತ್ತೆ"

—ಎಂದಳು ಲಲಿತ.

" ಗೊತ್ತು; ಒಂದು ದಿವಸದ ಭೇಟಿ."

" ಸಹಸಂಪಾದಕರು ಸೌಖ್ಯವೇ ?"

—ಎಂದನು ಸೀತು. ನನಗಿಂತಲೂ ಅವರ ಮೇಲೆ ಅವನಿಗೆ ಹೆಚ್ಚು ಕೋಪ.

" ಸೌಖ್ಯವಾಗಿದ್ದಾರೆ."

" ನನ್ನ ಕತೆಗಳು ಇವರ ಪತ್ರಿಕೆಗೆ ಮಾತ್ರ ಸರಿಹೋಗುವುದಿಲ್ಲವಂತೆ"

—ಎಂದ ಲಲಿತಳಿಗೆ.

" ನೀವು ಕತೆ ಬೇರೆ ಬರೆಯುತ್ತೀರೇನು ?"

" ಏಕೆ, ಬರೆಯಕೂಡದೆ ?"

" ಓದುವುದಕ್ಕೆ ಮಂದಿ ಬೇಕಲ್ಲ !"

—ಎಂದು ಅವಳು ನಕ್ಕಳು.

" ಓದುವುದಕ್ಕೆ ಮಾತ್ರ ನಾನು ಮಂದಿಯನ್ನು ಹುಡುಕುವುದಿಲ್ಲ. ಓದಿಬಿಟ್ಟು ನಗುವುದಕ್ಕೂ ಮಂದಿಯನ್ನು ಹುಡುಕುತ್ತೇನೆ "

" ಕೋಪ ಬಂತೇ ಮಾವ !"

" ನನಗೇಕೆ ಕೋಪ ? ನಾನು ಬರೆಯುವ ಕತೆಯನ್ನು ಓದಿಬಿಟ್ಟು ನೀವು ಕೋಪಗೊಳ್ಳದಿದ್ದರೆ ಸಾಕು."

"ಏನೂ ತಿಳಿಯಲಿಲ್ಲವಲ್ಲ!"

—ಎಂದಳು ಲಲಿತ.

"ಈಗ ತಿಳಿಯುವುದಿಲ್ಲ. ನಾನೇನೂ ಇವರ ಹಾಗೆ ಕಲ್ಪನೆಯ ಕತೆಗಳನ್ನು ಬರೆಯುವವನಲ್ಲ. ನಡೆದ ಕತೆಗಳನ್ನೇ ಬರೆಯುವುದಕ್ಕೆ ನನಗೆ ಗೊತ್ತು."

ನಾನು ಅವನನ್ನು ದಿಟ್ಟಿಸಿ ನೋಡಿದೆ. ಅವನೂ ನನ್ನನ್ನು ದುರುಗುಟ್ಟುಕೊಂಡು ನೋಡಿದನು. ಆ ನೋಟದಲ್ಲಿ ಅವನ ಮನದ ಮತ್ಸರವು ಎದ್ದು ಕಾಣುತ್ತಿತ್ತು.

"ಇವರು ನನಗೆ ಹೇಗೆ ಸಂಬಂಧವೆಂದು ನಿಮಗೆ ಹೇಳಲಿಲ್ಲವೆ! ನನ್ನ ಅತ್ತೆಯ ತಂಗಿಯ ಮಗ; ನನಗೆ ಮಾವನ ವರಸೆಯಾಗಬೇಕು"

—ಎಂದಳು ಲಲಿತ.

ಏಕೋ ನನಗೆ ಅದಕ್ಕೆ ಮೇಲೆ ಅಲ್ಲಿರಲು ಆಗಲಿಲ್ಲ. ಹೊರಡಲು ಎದ್ದುನಿಂತೆ.

"ಅವರು ಬಂದುಬಿಡುತ್ತಾರೆ; ಬಂದಮೇಲೆ ಹೋಗಬಹುದು"

—ಎಂದಳು ಲಲಿತ.

"ನಾನಿಲ್ಲಿರುವುದು ಸಂಪಾದಕರಿಗೆ ಅಡ್ಡಿಯಾಗಿದ್ದರೆ ನಾನೇ ಹೋಗುತ್ತೇನೆ"

—ಎಂದ ಸೇತು.

ಇಷ್ಟರಲ್ಲಿ ಅಲ್ಲಿಗೆ ಬೇರೊಬ್ಬ ಹುಡುಗಿ ಬಂದು ಸೇರಿದಳು. ಅವಳ ಅಲಂಕಾರವು ಕಣ್ಣನ್ನು ಕುಕ್ಕಿತು. ಕ್ರಿ. ಶ. ೨೦೦೦ ವರ್ಷದಲ್ಲಿ ಅಮೆರಿಕ ದೇಶದ ನಟಿಯರು ಧರಿಸಬೇಕಾದ ಉಡುಪುಗಳನ್ನು ಹೇಗೋ ತಿಳಿದು ಕೊಂಡು, ಈಗಲೇ ಆ ನಾಗರಿಕತೆಯನ್ನು ತನ್ನಲ್ಲಿಗೆ ಬರಮಾಡಿಕೊಂಡಿದ್ದಳು, ಆ ರಂಗಿನ ರಮಣಿ. ನಾನಲ್ಲಿಗೆ ಬರುವುದನ್ನರಿತು ನನ್ನನ್ನು ಸಂಧಿಸಲು ಅಲ್ಲಿಗೆ ಬಂದಳಂತೆ. ಅವಳು ಲಲಿತಳ ಸಹಪಾಠಿಯಂತೆ. ಈಗಲೂ ಕಾಲೇಜಿನಲ್ಲೇ ಓದುತ್ತಿದ್ದಾಳಂತೆ. ಹೆಸರು ಮಾಲತಿ.

"ಬಹಳ ಚೆನ್ನಾಗಿ ಬರೆಯುತ್ತೀರಿ ಸಾರ್ !"

—ಎಂದು ಆರಂಭಿಸಿ, ಅವಳು ಓದಿದ ಆಂಗ್ಲ ಪತ್ತೇದಾರಿ ಕಾದಂಬರಿಗಳ ಹೆಸರುಗಳನ್ನೆಲ್ಲವೂ ಒಪ್ಪಿಸಿಬಿಟ್ಟಳು. ಮಾತಿನ ಮಧ್ಯೆ ಒಂದು ಸಲವಾದರೂ ನನ್ನ ಸಣ್ಣ ಕತೆಯೋ, ಕಾದಂಬರಿಯೋ ಕಾಣಲೇ ಇಲ್ಲ. ಅರ್ಧ ಗಂಟೆಯಲ್ಲಿ ಅವಳ ಕಣ್ಣುಗಳು ಐವತ್ತು ಸಲ ತಿರುಗಿ ಬಿಟ್ಟವು. ಹಲ್ಲುಗಳಿಂದ ತನ್ನ ಸೀರೆಯ ಸೆರಗನ್ನು ಬಗೆಬಗೆಯಾಗಿ ಹಿಂಸಿಸಿದಳು. ಕುರ್ಚಿಯಲ್ಲಿ ಕೂರಲಾಗದವಳಂತೆ ಆ ಕಾಂತೆ ಮೂವತ್ತು ಭಂಗಿಗಳಲ್ಲಿ ಮುಗ್ಗರಿಸಿ ಕುಳಿತಳು. ಸೀತುರಾಮನು ಅವಳನ್ನೇ ನೆಟ್ಟದೃಷ್ಟಿಯಿಂದ ನೋಡುತ್ತಿದ್ದನು.

ಅವಳ ಗೆಳತಿಯರು, ಗೆಳೆಯರು, ಅವಳ ಕುಟುಂಬದ ಗೌರವ, ಅವಳ ಆಸ್ತಿಪಾಸ್ತಿ, ಭವಿಷ್ಯತ್ತಿನಲ್ಲಿ ಅವಳು ಕೈಗೊಳ್ಳಲಿರುವ ಮಹಾಯೋಜನೆಗಳು, ಎಲ್ಲವನ್ನೂ ನಾನು ಕ್ಷಣ ಹೊತ್ತಿನಲ್ಲಿ ತಿಳಿದುಕೊಂಡೆ. ಮೇಲಿಂದ ಮೇಲೆ ಅವಳ ಮಾತಿನ ಝುರಿಯಲ್ಲಿ ಗಂಡು ಗೆಳೆಯರು ಬಂದು ಬೀಳುತ್ತಿದ್ದರು. ನಟರು, ರಾಜಕಾರಣಿಗಳು, ಭಾಷಣಗಾರರು ಮುಂತಾಗಿ ಹಲವರ ಪರಿಚಯ ಅವಳಿಗಿದೆಯಂತೆ.

ಮೊದಲ ಐದು ನಿಮಿಷಗಳ ಕಾಲ ಅವಳ ಮಾತನ್ನು ನನ್ನಿಂದ ಕೇಳಿಕೊಂಡಿರಲು ಸಾಧ್ಯವಾಯಿತು. ನಂತರದ ಐದು ನಿಮಿಷಗಳು ಸಹಿಸಿಕೊಂಡಿರಲು ಸಾಧ್ಯವಾಯಿತು. ಆ ಮೇಲೆ ನನಗೆ ತಲೆಶೂಲಿ ಬಂದುಬಿಟ್ಟಿತು. ದೇವರೇ ! ಅದ್ಯಾವ ಪ್ರಾಣಿ ಇವಳನ್ನು ಕೈಹಿಡಿಯುತ್ತಾನೋ ? ಅವನಿಗೆ ನೀನೇ ಗತಿ. ಮಹಿಳೆಯರ ಪ್ರಗತಿಯನ್ನು ನಾನು ಹೃದಯಪೂರ್ವಕವಾಗಿ ಆದರಿಸುತ್ತೇನೆ. ಆದರೆ ಈ ತಿಳಿಗೇಡಿತನಕ್ಕೆ, ಹುಚ್ಚಾಟಗಳಿಗೇ 'ಪ್ರಗತಿ' ಎಂದು ಹೆಸರಾದರೆ ಬೇಕಿಲ್ಲ. ಅದು ನಾಶವಾಗಿ ಹೋಗಲಿ !

ಸಮಯಕ್ಕೆ ಸರಿಯಾಗಿ ಅಲ್ಲಿ ಬಂದು ಸೇರಿದ ನಾರಾಯಣಸ್ವಾಮಿ ಅವಳ ಮಾತಿನ ಗಾಳದಿಂದ ನನ್ನನ್ನು ಕಾಪಾಡಿದರು.

"ದಾರಿಯಲ್ಲಿ ಆಫೀಸಿಗೆ ಹೋಗಿ ನಿಮ್ಮನ್ನು ನೋಡಿಬಿಟ್ಟೇ ಬಂದೆ" —ಎಂದರು ನಾರಾಯಣಸ್ವಾಮಿ.

ಅವರ ಪ್ರೀತಿಯು ನನಗೆ ತಂಗಾಳಿಯ ತಂಪಿನ ಹಾಗೆ ಹಿತಕರವಾಗಿತ್ತು.

೬

ಕಾಂತಳ ತಂದೆ ರಾಮಲಿಂಗಂರವರ ಬಗ್ಗೆ ಸ್ವಲ್ಪ ಹೇಳಬೇಕಾದ ಪ್ರಸಂಗ ಈಗ ಬಂದಿದೆ. 'ತಾವರೆ'ಯನ್ನು ಅವರು ಹಲವು ವರ್ಷಗಳ ಹಿಂದೆ ಪ್ರಾರಂಭಿಸಿದಾಗ, ಯಾವ ಅನುಕೂಲವೂ ಇಲ್ಲದೆ ಕೇವಲ ಭಾಷಾಭಿಮಾನ ಮತ್ತು ಸ್ವಾಭಿಮಾನಗಳನ್ನೇ ಊರೆಗೋಲಾಗಿ ನಂಬಿ ಪತ್ರಿಕೆಯನ್ನು ಪ್ರಾರಂಭಿಸಿದರು. ಕಷ್ಟಪಟ್ಟು ದುಡಿದು ಪತ್ರಿಕೆಯನ್ನು ಉತ್ತಮ ದರ್ಜೆಗೆ ತಂದು ನಿಲ್ಲಿಸಿದರು. ಕೀರ್ತಿಯೂ ಅವರನ್ನು ಹುಡುಕಿ ಬಂದಿತು. ಆದರೆ ಹಣ ಮಾತ್ರ ಹುದುಗಿಕೊಂಡಿತು. ಪತ್ರಿಕೆಯನ್ನು ಮಾತ್ರ ನಂಬಿದರೆ ಹಸಿವೂ ಹೆಸರೂ ಮಾತ್ರ ತಮಗೆ ಉಳಿಯುವುದೆಂಬುದನ್ನರಿತ ಅವರು ಪತ್ರಿಕೆಯಿಂದ ಗಳಿಸಿದ ಪ್ರಭಾವವನ್ನು ಹಣದ ದಾರಿಗೆ ತಿರುಗಿಸಿದರು. ಹಲವು ಕಂಪೆನಿಗಳಲ್ಲಿ ಪಾಲುದಾರರಾಗಿ, ಹಲವು ಕಂಪೆನಿಗಳನ್ನು ಮುಳುಗಿಸಿ ಅವರು ಹಣವಂತರಾದರು.

ನಾನು ಪತ್ರಿಕೆಯ ಸಂಪಾದಕತ್ವದ ಹೊಣೆಯನ್ನು ಹೊತ್ತಮೇಲೆ, ನನ್ನ ರೀತಿನೀತಿಗೆ ಅವರು ಅಡ್ಡ ಬರುತ್ತಿರಲಿಲ್ಲ. ಬರಹಗಾರರಿಗೆ ಸಂಭಾವನೆ ಸಲ್ಲಿಸುವುದರಲ್ಲಿ ಮಾತ್ರ ನಾನು ಬಹಳ ಧಾರಾಳವಾಗಿದ್ದೇನೆಂದು ಆಗಾಗ ಅವರು ಸೂಚ್ಯವಾಗಿ ಹೇಳುತ್ತಿದ್ದರು.

"ನಮ್ಮ ಪತ್ರಿಕೆಯ ಸ್ಥಿತಿಗೆ ಇದು ಹೆಚ್ಚಲ್ಲವೆ?"

—ಎನ್ನುತ್ತಿದ್ದರು.

"ನಮ್ಮ ಪತ್ರಿಕೆಯ ಸ್ಥಿತಿ ಚೆನ್ನಾಗಿರಲು ಅವರ ಕತೆಗಳು ಅವಶ್ಯಕ, ಆದರೆ ಅವರ ದರಕ್ಕೆ ನಾವು ಕೊಡುವುದು ಅತ್ಯಲ್ಪ !"

"ಆದರೆ ಇತರ ಪತ್ರಿಕೆಗಳು ನಮಗಿಂತಲೂ ಕಡಿಮೆ ಕೊಡುತ್ತಿವೆ !"

"ದರವೂ ಅದಕ್ಕೆ ತಕ್ಕಂತೆಯೇ ಇದೆ. ಬರಡು ಭೂಮಿಯಲ್ಲಿ ಹೇಗೆ ಸಾಹಿತ್ಯದ ಪೈರು ಬೆಳೆಯುತ್ತದೆ? ಬರಹಗಾರನನ್ನು ವಂಚಿಸಿ. 'ಸಾಹಿತ್ಯದ ಬೆಳವಣಿಗೆಯಿಲ್ಲ'ವೆಂದು ಕೂಗಿದರೆ ಏನು ಪ್ರಯೋಜನ?"

—ಎಂದು ಹೇಳುತ್ತಿದ್ದೆ.

ರಾಮಲಿಂಗಂ ಆಗ ಯೋಚನೆ ಮಾಡುವರು.

ನನ್ನಲ್ಲೂ ವಿಚಾರ ತರಂಗಗಳು ಏಳುತ್ತಿದ್ದವು. ಮುದ್ರಣ ಕೆಲಸಗಾರ ಕೂಲಿ ಕಡಿಮೆಯಾದರೆ ಮುಷ್ಕರ ಹೂಡುತ್ತಾನೆ. ಕಾಗದ ವ್ಯಾಪಾರಿಗೆ ಹಣ ಬಾಕಿಯಾಗಿದ್ದರೆ ಅವನು ಪತ್ರಿಕೆಯ ಮಾಲಿಕನನ್ನೇ ಬ್ಯಾಂಕಿನಲ್ಲಿ ಅಡವಿಟ್ಟು ಬಿಡುತ್ತಾನೆ. ಆದರೆ ಒಬ್ಬನೇ ಒಬ್ಬನಿಂದ ಪತ್ರಿಕೆಗೋ ಅಥವಾ ಪತ್ರಿಕಾಕರ್ತರಿಗೋ ಅಡ್ಡಿಯಾಗುತ್ತಿಲ್ಲ. ಅವನೇ ಬರಹಗಾರ!

ಚಿತ್ರಗಾರ ಹಲವು ಬಗೆಯ ಚಿತ್ರಗಳನ್ನು ಒಂದೇ ತಿಂಗಳಿನಲ್ಲಿ ಸೃಜಿಸಬಹುದು; ಸಂಗೀತಗಾರ ಕೆಲವು ಹಾಡುಗಳನ್ನಿಟ್ಟುಕೊಂಡೇ ಹಲವು ಕಡೆ ಹಣವನ್ನು ಗಳಿಸಬಹುದು; ನಟನೋ ಅಥವಾ ನಟಿಯೋ 'ಯಾವ ಚಿತ್ರದಲ್ಲಿ ನಟಿಸುತ್ತೇವೆ' ಎಂಬ ತಿಳುವಳಿಕೆಯೂ ಇಲ್ಲದೆ ಉಡುಪುಗಳನ್ನು ಬದಲಾಯಿಸಿದರೆ ಸಾಕು. ಆದರೆ ಬರಹಗಾರ ಒಂದೊಂದು ಸಣ್ಣ ಕತೆಗೂ ಒಂದು ಹೊಸ ಕಲ್ಪನೆ ಮಾಡಲೇ ಬೇಕು. ತಿಂಗಳಿಗೆ ಹತ್ತು ಕತೆಗಳು ಅವನು ಹೊಸದಾಗಿಯೋ ಅಥವಾ ಹೊಸ ರೀತಿಯಲ್ಲೋ ಬರೆಯಲು ಸಾಧ್ಯವೇ? ಹಾಗೆ ಅವನು ಬರೆದರೂ ಈ ದೇಶದಲ್ಲಿ ಅವನು ತನ್ನ ಬರವಣಿಗೆಯಿಂದ ಬದುಕಲು ಸಾಧ್ಯವೇ?

ರಾಮಲಿಂಗಂರವರನ್ನು ಸಮಾಧಾನಗೊಳಿಸಲು ನಾನು ಈ ವಿವರಗಳೆಲ್ಲವನ್ನೂ ಹೇಳುತ್ತಿದ್ದೆ. ಅವರು ವಾದಕ್ಕೆ ನಿಲ್ಲದೆ

"ಸರಿ, ನಿಮ್ಮಿಷ್ಟ"

—ಎಂದು ಮೆತ್ತಗೆ ಹೇಳಿಬಿಟ್ಟು ಎದ್ದು ಹೋಗುತ್ತಿದ್ದರು.

ಕಾಂತಳು ನನ್ನ ಜೊತೆ ಬಹಳ ಅನ್ಯೋನ್ಯವಾಗಿ ನಡೆದುಕೊಳ್ಳುತ್ತಿರುವುದರ ಉದ್ದಿಶ್ಯವೇನೆಂಬುದು ಅವರಿದುವರೆಗೆ ಅರಿಯದೆ ಇರಲು ಸಾಧ್ಯವಿಲ್ಲ. ಕಾಂತಳನ್ನು ಕುರಿತು 'ತನ್ನ ಹೃದಯಾಂತರ್ಭಾವನೆಗಳನ್ನು ಮರೆಸಲರಿಯದ ಚೆಲುವೆ' ಎಂದು ಮೊದಲೇ ಹೇಳಿದ್ದೇನಲ್ಲವೆ! ಯಾರು ಕಂಡರು? ಒಂದು ವೇಳೆ ಅವಳೇ ತನ್ನ ತಂದೆಯ ಹತ್ತಿರ

"ನಾನು ಅವರನ್ನು ಮದುವೆಯಾಗಲಿದ್ದೇನಪ್ಪಾ"

ಎಂದು ಹೇಳಿದ್ದರೂ ಹೇಳಿರಬಹುದು.

ನನ್ನನ್ನು ಅವಳು ಮದುವೆಯಾಗುವುದರಲ್ಲಿ ರಾಮಲಿಂಗಂರವರಿಗೆ ಯಾವ ಆಕ್ಷೇಪಣೆಯೂ ಇಲ್ಲ. ಒಂದು ವೇಳೆ ಇದ್ದರೂ ಆ ಮನೆಯಲ್ಲಿ ಕಾಂತಳು ಇಟ್ಟದ್ದೇ ಕಟ್ಟಳೆ. ಅವರಿಂದ ಅದನ್ನು ಮೀರಲು ಸಾಧ್ಯವಿಲ್ಲ. ಜೊತೆಗೆ ನನ್ನನ್ನು ಅಳಿಯನನ್ನಾಗಿಸಿಕೊಂಡರೆ ನನಗೆ ಸಂಬಳವನ್ನು ಕೊಡುವ ಶ್ರಮವೂ ತಪ್ಪುತ್ತದೆ. ಸ್ವಂತ ಪತ್ರಿಕೆಯಾಗಿ ಬಿಡುವುದರಿಂದ ನಾನೂ ಬರಹಗಾರರಿಗೆ ಕಂಡ ಹಾಗೆ ಹಣವನ್ನು ಕೊಟ್ಟು ಹಾಳುಮಾಡುವುದಿಲ್ಲ!

ಬೆಳಗಿನ ಜಾವ. ನಾನು ನನ್ನ ಕೊಠಡಿಯಲ್ಲಿ ಒಬ್ಬಂಟಿಗನಾಗಿ ಕುಳಿತಿದ್ದೆ. ಸ್ವಾಮಿನಾಥ ಎಲ್ಲೋ ಹೋಗಿದ್ದನು. ಕೊಠಡಿಯ ಬಾಗಿಲು ಸದ್ದಿಲ್ಲದೆ ಒಳಕ್ಕೆ ತೆರೆಯಿತು. ಕಾಂತಳು ಅನುಮಾನಿಸುತ್ತಾ ನಿಂತಿದ್ದಳು. ಬಂದು ಕೂಡಲು ಕರೆದೆ. ಅವಳು ಬಂದು ನನ್ನೆದುರಿನಲ್ಲಿ ಕುರ್ಚಿಯಲ್ಲಿ ಕುಳಿತಳು.

"ನಿಮ್ಮ ಹತ್ತಿರ ಒಂದು ವಿಷಯವನ್ನು ಕೇಳಬೇಕು: ನೆಟ್ಟಗೆ ಉತ್ತರ ಕೊಡುತ್ತೀರಾ?"

ಇದ್ದಕ್ಕಿದ್ದ ಹಾಗೆ ಅವಳು ಹೀಗೆ ಕೇಳಿದ್ದು ಕಂಡು ನಾನು ಸ್ತಂಭಿತನಾದೆ. ನನ್ನನ್ನು ಕೆಣಕಿ ಮಾತಿಗೆಳೆಯಬೇಕೆಂಬುದಕ್ಕಾಗೇ ಅವಳು ಹರಿತ

ಪದಬಾಣಗಳನ್ನು ಜೋಡಿಸಿಕೊಂಡು ಬಂದಿದ್ದಾಳೆಂಬುದನ್ನು ಅರಿತು ಕೊಂಡೆ. ಪ್ರತ್ಯುತ್ತರ ಹೇಳದೆ ಅವಳ ಮುಖವನ್ನು ದಿಟ್ಟಿಸಿ ನೋಡಿದೆ.

"ನೀವು ಬೇರೆ ಯಾರನ್ನಾದರೂ ಪ್ರೀತಿಸುತ್ತಿದ್ದೀರೇನು ?"

"ಪ್ರೀತಿ ಒಂದು ಎಲ್ಲೆಕಟ್ಟಿನೊಳಗೆ ಅಡಗಿರುವುದಿಲ್ಲ. ನಾನು ಹಲವರ ಬಳಿ ಪ್ರೀತಿಯಿಂದ ನಡೆದುಕೊಳ್ಳುತ್ತೇನೆ. ಆದರೆ ನೀನು ಹೇಳುವ ರೀತಿ ಯಲ್ಲಿ....ಅಂದರೆ....ನಾನು ಯಾರನ್ನೂ ಪ್ರೇಮಿಸಿಲ್ಲ."

"ನಿಜವೇ ?"

"ಅಹುದು."

"ಸುಳ್ಳು, ಶುದ್ಧ ಸುಳ್ಳು. ನನ್ನ ಹತ್ತಿರ ಏಕೆ ಮರೆಮಾಚುತ್ತೀರಿ ? ನಿಮ್ಮ ಪ್ರೀತಿಯ ವಿಚಿತ್ರ ರೀತಿ ನನಗೆ ಚೆನ್ನಾಗಿ ತಿಳಿದುಹೋಯಿತು. ಗೌರವವನ್ನು ಮರೆತ ನೀವು ಹೇಗೆ ನನ್ನ ಪ್ರೀತಿಯನ್ನು ಅರಿಯಬಲ್ಲಿರಿ. ನೀವು ಆ ಲಲಿತಳನ್ನು...."

"ಹೋಗು, ಹೊರಗೆ !"

—ಎಂದು ಕಿರಚಿದೆ.

ಅವಳು ಹೋಗಲಿಲ್ಲ.

ಐದು ನಿಮಿಷಗಳು ಕಳೆಯಿತು. ಉರಿಯುತ್ತಿದ್ದ ನನ್ನ ಮನಸ್ಸು ಅವಳು ಕಣ್ಣೀರು ಬಿಡುತ್ತಿರುವುದನ್ನು ಕಂಡು ಕರಗಿತು.

"ಕಾಂತಾ ! ನಿನ್ನನ್ನು ನಂಬಿಸಲು ನನ್ನಿಂದ ಆಗದು. ಆದರೆ ಒಂದನ್ನು ಮಾತ್ರ ನೀನು ಚೆನ್ನಾಗಿ ನೆನಪಿನಲ್ಲಿಡು. ಪ್ರೀತಿ ಎಂಬುದು ಬೇರೆ; ಆಸೆ ಎಂಬುದು ಬೇರೆ."

"ನನ್ನನ್ನು ಕ್ಷಮಿಸಿರಿ. ಒಂದು ಮಾತ್ರ ಖಚಿತ. ನಿಮಗೆ ಹೃದಯವೇ ಇಲ್ಲ. ನೀವು ಬರೆಯುವುದೆಲ್ಲವೂ ಇತರರನ್ನು ವಂಚಿಸಿ ಮೋಸ ಗೊಳಿಸುವುದಕ್ಕಾಗಿಯೇ."

"ಕಾಂತಾ ! ಕಲಾವಿದನನ್ನೂ ಆದರ್ಶವಾದಿಯನ್ನೂ ಮದುವೆ

ಯಾದರೆ ನಿನ್ನಂಥಾ ಹೆಣ್ಣಿಗೆ, ಅವಳು ನಿರೀಕ್ಷಿಸುವ ಸುಖವು ಸಿಗುವುದಿಲ್ಲ. ಮದುವೆಯ ತಾರೀಖನ್ನು ಸಾಧ್ಯವಾದಷ್ಟು ನಾನು ದೂರವಿಡಲು ಬಯಸುತ್ತೇನೆ."

"ಹೊಣೆಗಾರಿಕೆಯನ್ನು ಹೊರಲು ನಿಮಗೆ ಎದೆಗಾರಿಕೆಯಿಲ್ಲ. ನೀವು ಹೇಡಿ."

"ಹೇಡಿಯೆಂದರೂ ಸರಿ; ಕಲೆಯ ಹುಚ್ಚನೆಂದರೂ ಸರಿ."

"ಏನು ಮಾಡಲಿದ್ದೀರಿ ಮುಂದೆ?"

"ಜನರ ದುಃಖವನ್ನಳಿಸಲು ನನ್ನ ಬರವಣಿಗೆಯನ್ನು ಒಂದು ಸಾಧನವನ್ನಾಗಿ ಮಾಡುತ್ತೇನೆ. ಸಮಾಜ ಕ್ರಾಂತಿಗೆಂದು ದೊಡ್ಡ ದೊಡ್ಡ ಬೆಟ್ಟಗಳನ್ನುರುಳಿಸಲು ನನ್ನಿಂದ ಆಗದೆ ಹೋದರೂ, ಸಮಾಜದ ತಾಪವನ್ನು ತಣಿಸುವ ತಂಗಾಳಿಯಾಗಿ ನಾನಿರಬಹುದಲ್ಲವೆ? ಸಣ್ಣ ಸಣ್ಣ ಕತೆಗಳನ್ನು ಹೇಳಿ ಮಾನವರ ಮನಸ್ಸಿನಲ್ಲಿ ಬದಲಾವಣೆಯನ್ನು ತರುವುದೂ ಒಂದು ಸೇವೆಯಲ್ಲವೆ?"

"ಬರೆಯಬೇಡಿರೆಂದು ನಿಮ್ಮ ಕೈಗಳನ್ನು ನಾನು ಹಿಡಿದುಕೊಳ್ಳುವೆನೇ?"

"ನಾನು ನಿನ್ನನ್ನು ಮೊದಲ ಬಾರಿ ನೋಡಿದಾಗಿನಿಂದಲೇ ನಿನ್ನನ್ನು ನನ್ನ ತಂಗಿಯೆಂದು ಭಾವಿಸಿಕೊಂಡೆ. ಬೇರೆ ರೀತಿಯಾಗಿ ಭಾವಿಸದೆ ಹೋದುದು ನನ್ನ ತಪ್ಪೇನು?"

"ನೀವು ಬಹಳ ಸ್ವಾರ್ಥಿಗಳು!"

"ಪ್ರೇಮಿಸುವುದೂ ಸ್ವಾರ್ಥವಲ್ಲವೆ?"

"ನಿಜ ಹೇಳಿ. ಮೊದಲೇ ನೀವು ಯಾರನ್ನಾದರೂ ಪ್ರೇಮಿಸಿ ಕಳೆದು ಕೊಂಡಿದ್ದೀರಾ?"

—ಎಂದಳು.

ಅವಳ ಮನಸ್ಸು ಬದಲಾಗುತ್ತ ಬರುತ್ತಿರುವುದನ್ನು ಅರಿತೆ. ಅದನ್ನು ಪೂರ್ಣವಾಗಿ ಬದಲಾಯಿಸಬೇಕಾದರೆ ಅದಕ್ಕೆ ತಕ್ಕಂತೆ ಏನನ್ನಾದರೂ

ಹೇಳಬೇಕು. ಇದುವರೆಗೆ ನಾನು ಯಾರನ್ನೂ ಪ್ರೇಮಿಸಿದ್ದೂ ಇಲ್ಲ; ಕೈ ಬಿಟ್ಟಿದ್ದೂ ಇಲ್ಲ. ಮೊದಲ ನೋಟದಲ್ಲೇ ಪ್ರೇಮ, ನೋಡದೆಯೇ ಪ್ರೇಮ ಪ್ರಥಮ ಪ್ರೇಮ ಮುಂತಾದ ಆಕರ್ಷಕ ನುಡಿಗಳಲ್ಲಿ ನನಗೆ ಸ್ವಲ್ಪವೂ ನಂಬಿಕೆಯಿಲ್ಲ. ಪ್ರೇಮವೆಂಬುದು ಅಷ್ಟು ಅಗ್ಗವಾಗಿ ಹೋದರೆ ಆಮೇಲೆ ಜಗತ್ತಿನಲ್ಲಿ ಒಬ್ಬರನ್ನೊಬ್ಬರು ಪ್ರೇಮಿಸುವುದೇ ಇಲ್ಲ. ಸುಲಭವಾಗಿ ಸಿಗುವ ವಿಷಯವಾದರೆ ಯಾರು ಅದರಲ್ಲಿ ಹೆಚ್ಚು ಆಸಕ್ತಿ ತಾಳುತ್ತಾರೆ? ಆದರೂ ಪ್ರೇಮ ಕತೆಗಳನ್ನು ಬರೆಯುವ ಸಾಹಿತಿಯಾದ ನಾನು ಅವಳನ್ನು ತೃಪ್ತಿಗೊಳಿಸುವುದಕ್ಕಾಗೇ ಎರಡು ಸುಳ್ಳು ಕತೆಗಳನ್ನು ತಯಾರಿಸಿದೆ. 'ಸಾವಿರ ಸುಳ್ಳು ಹೇಳಿಯಾದರೂ ಒಂದು ಮದುವೆಯನ್ನು ಮುಗಿಸಬೇಕು' ಎಂದು ಹೇಳಿದ ಹಿರಿಯರು ಹತ್ತು ಸಾವಿರ ಸುಳ್ಳನ್ನು ಹೇಳಿಯಾದರೂ ಒಂದು ಮದುವೆಯಿಂದ ಪಾರಾಗಬೇಕು' ಎಂಬುದನ್ನು ಅರಿಯಲಾರದೆ ಹೋದುದೇಕೆ?

ನಾನು ಕತೆಯನ್ನು ಹೇಳಿದೆ:

"ಮೊಟ್ಟಮೊದಲು ನಾನು ಒಂದು ಜಮೀನುದಾರರ ಮಗಳನ್ನು ಪ್ರೇಮಿಸಿದೆ. ನನ್ನ ಅದೃಷ್ಟ ಚೆನ್ನಾಗಿತ್ತೆನ್ನಬೇಕು. ಒಳ್ಳೆಯ ಸಮಯದಲ್ಲೇ ಆ ಜಮೀನುದಾರರಿಗೆ ತಿಳಿಯುವುದಕ್ಕೆ ಮೊದಲೇ ನಮ್ಮ ಪ್ರೇಮವು ಮುರಿದುಬಿತ್ತು. ಅವರಿಗೆ ತಿಳಿದಿದ್ದರೆ ನನ್ನ ತಲೆಯನ್ನು ಛೇದಿಸಿ ತೆಗೆದುಕೊಂಡು ಹೋಗಿ ಅವರ ಬೇಟೆನಾಯಿಗೆ ಹಾಕಿರುತ್ತಿದ್ದರು!"

"ಅದು ಹೇಗೆ ಮುರಿಯಿತು"

—ಎಂದು ಕೇಳಿದಳು.

"ಅವಳು ನನ್ನನ್ನು ಕೋಟೂ, ಸೂಟೂ ಹಾಕಿಕೊಳ್ಳಬೇಕೆಂದಳು. ನಾನು ಅಂಗಿ ಮತ್ತು ಪಂಚೆಯನ್ನು ಮಾತ್ರ ಉಡುತ್ತೇನೆ ಎಂದೆ–ಇಷ್ಟೇ ವಿಷಯ."

"ಅವಳಿಗಾಗಿ ಹೋಗಿ ಪ್ರಾಣ ಬಿಡುವುದರಲ್ಲಿದ್ದಿರಲ್ಲ! ಒಳ್ಳೆಯ ಸಮಯಕ್ಕೆ ತಪ್ಪಿಸಿಕೊಂಡಿರಿ."

"ನಾನೂ ಅದನ್ನು ನೆನೆದೇ ನಗುತ್ತಿರುತ್ತೇನೆ. ಕೆಲವು ದೊಡ್ಡ ಕಡೆಗಳಲ್ಲಿ ಪ್ರೇಮಕ್ಕೆ ಇರುವ ಬೆಲೆ ಬಟ್ಟೆಗಿರುವ ಬೆಲೆಯಷ್ಟೆ. ಒಗೆದಾಗ ಬಟ್ಟೆ ಹೊಳೆಯುತ್ತಿರುತ್ತದೆ; ಬಳಿಕ ಮಡಿಕೆ ಕಳೆಯುತ್ತದೆ; ಕೊಳೆಯಾಗುತ್ತದೆ; ಹರಿದು ಹೋಗುತ್ತದೆ;– ಆಮೇಲೆ ಅದನ್ನು ಬಿಸಾಡಿಬಿಟ್ಟು ಬೇರೆ ಬಟ್ಟೆಯನ್ನು ಹಾಕಿಕೊಳ್ಳಬಹುದು!"

"ಹ್ಣಂ! ಆಮೇಲೆ"

—ಎಂದು ಅವಳು ಅಕ್ಕರೆಯಿಂದ ಕೇಳಿದಳು. ಅಜ್ಜಿಯ ಬಳಿ ಕತೆ ಕೇಳುವ ಪುಟ್ಟ ಮಗುವಿನ ಉತ್ಸಾಹ ಅವಳಲ್ಲಿ ಕಂಡಿತು.

"ಎರಡನೆಯದಾಗಿ ಬೇರೆ ಜಾತಿಗೆ ಸೇರಿದ ಹೆಣ್ಣನ್ನು ಮದುವೆಯಾಗಲು ಬಯಸಿದೆ. ಇದನ್ನರಿತ ಅವಳ ತಂದೆತಾಯಿಗಳು ಊರನ್ನು ಬಿಟ್ಟೇ ವರ್ಗಾಯಿಸಿಕೊಂಡು ಹೋಗಿಬಿಟ್ಟರು."

"ಊರನ್ನು ಬಿಟ್ಟು ವರ್ಗವಾದರೇನು? ಮನಸ್ಸು—"

"ಮನಸ್ಸೂ ಬದಲಾಯಿತು. ಅದನ್ನೇ ಹೇಳುವುದಕ್ಕೆ ಬಂದೆ! ಎರಡು ತಿಂಗಳು ಬಿಟ್ಟು ಅವಳನ್ನು ಹೋಗಿ ನೋಡಿದಾಗ, 'ಊರನ್ನು ಬಿಟ್ಟು ಬಂದ ಮೂರು ದಿನ ಹುಚ್ಚು ಹಿಡಿದವಳ ಹಾಗಿದ್ದೆ. ಆಮೇಲೆ ಎಲ್ಲವೂ ಸರಿಹೋಯಿತು. ನನಗೆ ಮುಂದಿನ ತಿಂಗಳು ಮದುವೆ. ಆಹ್ವಾನ ಪತ್ರಿಕೆ ಕಳುಹಿಸುತ್ತೇನೆ' ಎಂದಳು!"

"ಸರಿ ಹೋಯ್ತು...."

ಸ್ವಲ್ಪ ಹೊತ್ತು ಅಲ್ಲಿ ಮೌನವಾವರಿಸಿತ್ತು.

"ಕಾಂತಾ! ನನ್ನನ್ನು ಯಾವಾಗಲೂ 'ಅಣ್ಣಾ' ಎಂದು ಕರೆಯುತ್ತೀಯಾ? ಅಣ್ಣನೆಂದೇ ಭಾವಿಸುತ್ತೀಯಾ?"

—ಎಂದು ಕೇಳಿದೆ, ಅಲ್ಲಿ ನೆಲೆಸಿದ್ದ ಮೌನವನ್ನು ಮುರಿದು.

ಅವಳು ನಕ್ಕಳು; ಅವಳನ್ನು ನಗಿಸಿದ ನಾನು ಅವಳಿಗರಿಯದಂತೆ ಮನದಲ್ಲಿ ಅತ್ತೆ.

"ನೀವು ನನ್ನ ಅಣ್ಣ! ಆದರೆ ಉತ್ತರ ದೇಶದ ಕಡೆಯಲ್ಲಿ ಹೇಳುತ್ತಾರಲ್ಲ ಆ ರೀತಿಯ ಅಣ್ಣನಲ್ಲ!"

—ಎಂದು ಹೇಳಿ ಕಿಲಕಿಲನೆ ನಕ್ಕಳು.

ನನ್ನ ಹೃದಯ ಹಗುರಾಯಿತು. ನಿಟ್ಟುಸಿರುಬಿಡುತ್ತಾ ಕುರ್ಚಿಯಲ್ಲಿ ಒರಗಿದೆ. ಕಾಫಿ ತರಿಸಲು ಬಾಗಿಲಿನ ಕಡೆ ಹುಡುಗನನ್ನು ನೋಡಿದಾಗ, ಸ್ವಾಮಿನಾಥನು ಅಲ್ಲಿಗೆ ಬಂದು ಬಾಗಿ ನೋಡಿಬಿಟ್ಟು ಅವಸರವಾಗಿ ತಿರುಗಿಬಿಟ್ಟನು. ಒಳಗೆ ಬರಲಿಲ್ಲ.

"ಯಾರಿವರು?"

—ಎಂದಳು ಕಾಂತಾ.

"ನನ್ನ ಸ್ನೇಹಿತ ಸ್ವಾಮಿನಾಥ."

"ನಿಮ್ಮ ಹಾಗೇ ಇರುತ್ತಾರೋ? ಹೆಣ್ಣಿನ ವಾಸನೆಯೂ ಹಿಡಿಸುವುದಿಲ್ಲವೋ!"

"ಅದು ಅವನಿಗೆ ಬಹಳ ಹಿಡಿಸುತ್ತದೆ!"

"ಮತ್ತೇಕೆ ಅವರು ನಿನ್ನೆ ನನ್ನನ್ನು ಆ ಓಟ ಓಡಿಸಿದ್ದು?"

"ನಿನ್ನೆಯೋ?"

"ಅಹುದು. ಆ ಕತೆ ಸ್ವಲ್ಪ ಕೇಳಿ. ನಿನ್ನೆ ಸಂಜೆ ನಿಮ್ಮನ್ನು ಹುಡುಕಿಕೊಂಡು ಇಲ್ಲಿ ಬಂದೆ.

'ಯಾರು ನೀವು?'

—ಎಂದು ಗುಡುಗಿದರು.

'ಕತೆ ಬರೆಯುವವಳು; ಸಂಪಾದಕರನ್ನು ನೋಡಲು ಬಂದೆ'

—ಎಂದೆ.

'ಇದು ಆಫೀಸ್ ಹೊತ್ತೂ ಅಲ್ಲ; ಸಂಪಾದಕರನ್ನು ನೋಡುವ ಸ್ಥಳವೂ ಅಲ್ಲ; ಇದು ಅವರ ಖಾಸಗಿ ಕೊಠಡಿ'

—ಎಂದು ರೇಗಿದರು.

'ಅವರೇ ಬರಹೇಳಿದರು'

—ಎಂದೆ.

'ಹೇಳಿದರೇ! ಹಾಗಾದರೆ ನಾಳೆ ಆಫೀಸ್ ವೇಳೆಯಲ್ಲಿ ಬಂದು ನೋಡಿ'

—ಎಂದರು.

ಹೀಗೆ ಹೇಳಿ ಬಿಟ್ಟು ನನ್ನನ್ನು ನಾಲ್ಕು ಬಾರಿ ಮೇಲಕ್ಕೂ ಕೆಳಕ್ಕೂ ದುರುಗುಟ್ಟಿ ನೋಡಿದರು."

"ನೋಡಿರುತ್ತಾನೆ!"

"ಬಹಳ ತುಂಟರೆಂದು ಕಾಣುತ್ತೆ!"

"ಅಹುದು. ಅವನು ಬಹಳ ತುಂಟ!"

ಉಲ್ಲಾಸದಿಂದ ಕಾಂತಳು ಕುರ್ಚಿಯನ್ನು ಬಿಟ್ಟೆದ್ದಳು.

"ಬರಲೇನಣ್ಣಾ!"

—ಎಂದು ಮುತ್ತಿನಂಥಾ ಅವಳ ಹಲ್ಲುಗಳು ಕಾಣುವ ಹಾಗೆ ನಗುತ್ತಾ ಕೊಠಡಿಯ ಹೊರಗೆ ಹೋದಳು.

ಅವಳು ಹೋದ ಮೇಲೆ ಸ್ವಲ್ಪ ಹೊತ್ತು ಮೇಜಿನ ಮೇಲೆ ತಲೆಯನ್ನಿಟ್ಟುಕೊಂಡಿದ್ದೆ. ಮಬ್ಬುಗತ್ತಲಾವರಿಸುತ್ತಿರುವ ಸಂಜೆಯ ಹೊತ್ತಿನಲ್ಲಿ, ಸಮುದ್ರ ದಂಡೆಯ ಮರಳ ದಿಣ್ಣೆಯಲ್ಲಿ ಒಂಟಿಯಾಗಿ ಮಲಗಿರುವಾಗ ಒಂದು ಬಗೆಯಾದ ಅನುಭವವುಂಟಾಗುವುದಲ್ಲವೆ? ಈಗ ನನಗೆ ಆ ರೀತಿ ಇತ್ತು. ಭೂಕಂಪವನ್ನೂ ಅದರ ಭಯಂಕರ ಪರಿಣಾಮಗಳನ್ನೂ ನಿರೀಕ್ಷಿಸಿದ್ದ ನನಗೆ ಕಾಂತಳ ಪ್ರಶ್ನೆ ಇಷ್ಟು ಸುಲಭವಾಗಿ ಬಗೆಹರಿದು ಬಿಟ್ಟಿರುವುದು ನಂಬುವುದಕ್ಕೇ ಸಾಧ್ಯವಿಲ್ಲ. ವಿಚಿತ್ರದಲ್ಲೂ ವಿಚಿತ್ರವಾಗಿದೆ ಎನ್ನಬೇಕು. ಹೆಂಗಸರೇ ವಿಚಿತ್ರವಾದವರು!

ತಲೆಯೆತ್ತಿ ನೋಡಿದಾಗ ಕಾಂತಳು ಕುಳಿತಿದ್ದ ಸ್ಥಳದಲ್ಲಿ ಸ್ವಾಮಿನಾಥ ಕುಳಿತಿದ್ದ.

" ಯೋಚನೆ ಬಲವಾಗಿದೆಯಲ್ಲಾ !"

—ಎಂದು ಅವನು ಗೇಲಿಯಾಗಿ ನಕ್ಕ.

" ಒಂದು ಯೋಚನೆಯೂ ಇಲ್ಲ."

" ಕತೆಗಾರರೇ ! ನಾನು ಒಂದು ಕತೆ ಹೇಳುತ್ತೇನೆ. ಕೇಳುತ್ತೀರಾ ?"

' ಏನು ಕತೆ ?'

ಎಂದು ಕೇಳುವವನಂತೆ ಅವನನ್ನು ದಿಟ್ಟಿಸಿದೆ.

" ಸನ್ಯಾಸವನ್ನು ಸ್ವೀಕರಿಸುವುದಕ್ಕಾಗಿ ಒಬ್ಬ ಯುವಕ ಗುರುನಾಥರನ್ನು ಹುಡುಕಿಕೊಂಡು ಹೋದನಂತೆ. ಅಲ್ಲಿ ಆ ಗುರುನಾಥರು ತಮ್ಮ ಐದನೆಯ ಪತ್ನಿಯೊಡನೆ ಮದುವೆಯ ಮಂಟಪದಲ್ಲಿ ಕುಳಿತಿದ್ದರಂತೆ !"

ಸ್ವಾಮಿನಾಥ ನೂರು ರೂಪಾಯಿ ನೋಟೊಂದನ್ನು ನನ್ನ ಹತ್ತಿರ ಕೊಟ್ಟನು. ಅವನು ಮಾತನಾಡಿರುವ ಕಮೀಷನ್ ವ್ಯಾಪಾರವೊಂದರ ಮುಂಗಡ ಹಣವಂತೆ ಇದು. ಇನ್ನು ಬಾಕಿ ಹಣವು ಎರಡು ದಿನಗಳಲ್ಲಿ ಬರುತ್ತದಂತೆ.

" ನಿನ್ನೆ ಇವಳನ್ನು ಇಲ್ಲಿಗೆ ಬರಹೇಳಿ ಬಿಟ್ಟು ಎಲ್ಲಿಗೆ ಹೋಗಿದ್ದೆ ?"

—ಎಂದ ಕುಚೋದ್ಯವಾಗಿ.

" ನಾನು ಬರಹೇಳಲಿಲ್ಲ,"

" ಒಂದು ಕಡೆಯಾಗಿದ್ದರೆ ನಿನಗೆ ನೆನಪಿರುತ್ತದೆ. ಹಲವರ ಜೊತೆ, ಹಲವು ಕಡೆ, ಹಲವು ನೆನಪುಗಳು...."

" ಸ್ವಾಮಿನಾಥಾ !"

—ಎಂದು ಕಿರಿಚಿದೆ ಕೋಪದಿಂದ.

"ಸೋಮು, ನಾನು ಕಣ್ಣಿಂದ ಕಂಡಿದ್ದೂ, ಕಿವಿಯಿಂದ ಕೇಳಿದ್ದನ್ನೂ ಹೇಳುತ್ತೇನೆ."

"ಇವಳು ಕತೆ ಬರೆಯುವವಳಲ್ಲ; ಪತ್ರಿಕೆಯ ಮಾಲಿಕರ ಮಗಳು; ನನ್ನ ತಂಗಿಯ ಹಾಗೆ. ನಿನ್ನೆ ಇವಳು ನಿನ್ನನ್ನು ವಂಚಿಸಿದ್ದಾಳೆ."

"ತಂಗಿಯ ಹಾಗೆಯೆ!"

—ಎಂದು ಕೇಳಿಕೊಂಡೇ ಆನಂದದಿಂದ ಅವನು ನನ್ನನ್ನು ನೋಡಿದನು.

"ಬಹಳ ತುಂಟಿಯೆಂದು ಕಾಣುತ್ತದೆ!"

—ಎಂದನು.

ಆಗ ನನಗೆ ಕಾಂತಳು ಅವನನ್ನು ಕುರಿತು ಹೇಳಿದ,

'ಬಹಳ ತುಂಟರೆಂದು ಕಾಣುತ್ತದೆ!'

—ಎಂಬ ನುಡಿಗಳು ಜ್ಞಾಪಕಕ್ಕೆ ಬಂದವು.

"ಅವಳಿರಲಿ. ಕಿವಿಯಲ್ಲಿ ಕೇಳಿದ್ದನ್ನು ಈಗ ಹೇಳು"

—ಎಂದೆ ಕಾತರನಾಗಿ.

"ನಾನು ನಂಬಲಿಲ್ಲ; ಬಹಳ ಮೋಸವಾದ ವಿಷಯ. ನಂಬದೆ ಇರಲೂ ಸಾಧ್ಯವಿಲ್ಲ."

"ನೆಟ್ಟಗೆ ಹೇಳು: ಯಾರು ಹೇಳಿದ್ದು?"

"ನನಗೆ ಸೇತುರಾಮನು ಗೊತ್ತು"

—ಎಂದ.

"ಅಯೋಗ್ಯ!"

"ಯೋಗ್ಯರೆನಿಸಿಕೊಂಡವರ ಅಯೋಗ್ಯತನಕ್ಕೂ, ಅಯೋಗ್ಯರೆನಿಸಿ ಕೊಂಡವರ ಅಯೋಗ್ಯತನಕ್ಕೂ ಏನಾದರೂ ಅಂತರವಿದೆಯೆ? ಸೋಮು, ನಿನ್ನಂಥವರು ಹೆಂಗಸರ ಬಳಿ ಅನುತಾಪಗೊಳ್ಳಲೇಬಾರದು."

"ನಾನು ಯಾರ ಮೇಲೂ ಅನುತಾಪಗೊಳ್ಳಲಿಲ್ಲ."

"ನಾನು ಹಾಳಾಗಿ ಹೋಗಿದ್ದಕ್ಕೆ ಈ ದಯಾಳು ಗುಣವೇ ಕಾರಣ. ಬಡ ಹುಡುಗಿಯರಿಗೆ ಸಹಾಯ ಮಾಡಲು ಬಯಸಿದೆ. ಆದರೆ ಪ್ರತಿಫಲ ವಿಲ್ಲದೆ ಸಹಾಯ ಮಾಡುವುದೆಂಬುದು ನಡೆಯುವ ಕಾರ್ಯವೆ?"

—ಎಂದು ನನ್ನನ್ನು ದಿಟ್ಟಿಸಿ ನೋಡಿದ.

ಅವನ ಮಾತು ನನಗೆ ಹಿಡಿಸಲಿಲ್ಲ. ಅವನೂ ತನ್ನ ಮಾತನ್ನು ನಿಲ್ಲಿಸಲಿಲ್ಲ. ಅವನು ಹೇಳಿದನು.

"ನೀನು ನನ್ನಂಥಾ ಸ್ಥಿತಿಯಲ್ಲಿರುವವನಲ್ಲ. ಹತ್ತು ಜನಕ್ಕೆ ನೀನು ಪರಿಚಿತ. ಫಲವರು ನಿನ್ನ ಹೆಸರನ್ನು ಪ್ರೀತಿಯಿಂದ ನೆನೆಸಿಕೊಳ್ಳುತ್ತಾರೆ, ನಿನ್ನನ್ನು ಗೌರವದಿಂದ ಕಾಣುತ್ತಾರೆ. ಆ ಗೌರವವನ್ನು ಕಾಯ್ದುಕೊಳ್ಳು ವುದು ನಿನ್ನ ಕರ್ತವ್ಯವಲ್ಲವೇ?"

"ನೀನು ಭಾವಿಸುವುದೆಲ್ಲ ಸುಳ್ಳು"

—ಎಂದೆ.

"ನಿನಗಿಂತಲೂ ಆ ನಾರಾಯಣಸ್ವಾಮಿಯವರ ಬಗ್ಗೆ ನನಗೆ ಹೆಚ್ಚು ಗೊತ್ತಿದೆ."

ನನಗೆ ಮೈಯೆಲ್ಲ ಮುಳ್ಳುನಾಟಿದ ಹಾಗಾಯಿತು.

"ನಾರಾಯಣಸ್ವಾಮಿಯವರ ಮೊದಲ ಹೆಂಡತಿ ತೀರಿಹೋಗಿ ಹತ್ತು ಹನ್ನೆರಡು ವರ್ಷಗಳಿಗೆ ಮೇಲಾಗುತ್ತದೆ. ಅವರಿಗೆ ಮಕ್ಕಳಿಲ್ಲ. ಲಲಿತಳ ಸ್ವಭಾವ ಅವರನ್ನು ಮರುಳುಗೊಳಿಸಿತು. ಅವರ ಹಣವು ಅವಳನ್ನು ಮರುಳುಗೊಳಿಸಿತು. ಸಮ್ಮತಿಸಿ ಮದುವೆಯಾದಳು."

"ಇರಬಹುದು. ಇದ್ದರೇನು?"

"ಅವರೂ, ಲಲಿತಳೂ ತಂದೆ ಮಗಳಂತೆಯೇ ಬಾಳುತ್ತಿದ್ದಾರೆ. ಹಾಗೇ ಅವರಿಂದ ಇರಲು ಸಾಧ್ಯ!"

"........!"

"ಸೋಮು, ಆಸ್ತಿಗೆ ಹಕ್ಕುದಾರನಾಗಲು ಒಂದು ಮಗುವಿಗಾಗಿಯೂ, ಜೀವನದ ಸುಖ ಸೌಕರ್ಯಗಳಿಗಾಗಿ ಒಂದು ಹೆಣ್ಣನ್ನೂ ಬಯಸಿ ಅವರು

ಲಲಿತಳನ್ನು ಮದುವೆಯಾದರು. ಮದುವೆಯ ಮೂರನೆಯ ದಿನವೇ ಅವರಿಗೆ ಕಾರ್ ಅಪಘಾತವುಂಟಾಯಿತು. ಗುಣಮುಖರಾಗಿ ಹಾಸಿಗೆ ಯಿಂದೆದ್ದಾಗ ಅವರು ಗಂಡನಾಗಿರಲಾರದ ಸ್ಥಿತಿಯಲ್ಲಿದ್ದರು. ಈಗಲೂ ಹಾಗೇ ಇದ್ದಾರೆ."

ನನ್ನ ಮನದಲ್ಲಿ ಬಿರುಗಾಳಿಯೆದ್ದಿತು. ರಭಸದಿಂದ ಬೀಸಿತು. ಮದುವೆಯನಂತರ ಅವರಿಗೆ ಆದ ಕಾರಿನ ಅನಾಹುತದ ಬಗ್ಗೆಯೂ ಒಂದು ಬಾರಿ ಲಲಿತಳು ನನಗೆ ಹೇಳಿದ್ದಾಳೆ. ಆದರೆ....?

"ಆದ್ದರಿಂದ ವಂಚಕರ ಬಲೆಗೆ ಬಿದ್ದು ನಿನ್ನನ್ನು ನೀನು ಕೆಡಿಸಿಕೊಳ್ಳ ಬೇಡವೆಂದು ಎಚ್ಚರಿಸುತ್ತೇನೆ"

—ಎಂದ ಸ್ವಾಮಿನಾಥ.

ಮನವು ಮಾತ್ರವಲ್ಲ; ಈಗ ನನ್ನ ತಲೆಯೂ ಸುತ್ತಿತು. ನನ್ನ ಕೊಠಡಿ, ಮೇಜು, ಕುರ್ಚಿ, ಪಟಗಳು, ಪುಸ್ತಕಗಳು ಎಲ್ಲವೂ ರಭಸದಿಂದ ಸುತ್ತಿದವು. ಯಾರು ವಂಚಕರು? ನಾರಾಯಣಸ್ವಾಮಿಯೇ! ಯಾರು ವಂಚಕಿ? ಲಲಿತಳೇ! ಇವರು ನನಗೆ ಬಲೆ ಬೀಸುತ್ತಾರೆಯೇ? ಛೇ! ಇದನ್ನು ಕನಸಿನಲ್ಲೂ ನಂಬುವುದಕ್ಕೆ ಅಸಾಧ್ಯ! ನನ್ನೆದುರಿನಲ್ಲಿರುವುದು ಸ್ವಾಮಿನಾಥನಲ್ಲದೆ ಆ ದ್ರೋಹಿ ಸೇತುರಾಮನಾಗಿದ್ದಿದ್ದರೆ....

"ಸಾಕು ನಿಲ್ಲಿಸು!"

—ಎಂದು ಆರ್ಭಟಿಸಿದೆ.

# ೭

ವೇಳೆಯನ್ನು ಕಳೆಯಲು ಮದರಾಸಿನಲ್ಲಿ ಸಮುದ್ರದಂಡೆಯಿರುವ ಹಾಗೆ ತಿರುಚ್ಚಿಯಲ್ಲಿ ಕಾವೇರಿ ತೀರವು ಉಪಯೋಗಕ್ಕೆ ಬರುವುದಿಲ್ಲ. ಸಂಜೆಯ ಹೊತ್ತು ತಿರುಗಾಡಲು ತಕ್ಕ ಉದ್ಯಾನವನಗಳೂ ಇಲ್ಲಿಲ್ಲ. ನಾನು ಆಫೀಸಿಗೆ ಬಂದಮೇಲೆ ಹಿಂಬದಿಯಲ್ಲಿದ್ದ ತೋಟದಲ್ಲೇ ಬ್ಯಾಡ್‌ಮಿಂಟನ್ ಆಡಲು ಒಂದು ಕಡೆ ಸ್ಥಳವನ್ನು ಪ್ರತ್ಯೇಕಿಸಿದೆ. ಆದರೆ ಆಟವಾಡಲು ಜನರು ಮಾತ್ರ ಸಿಗಲಿಲ್ಲ. ಕೆಲಸ ಮುಗಿದ ಬಳಿಕ ಮನೆಗಳಿಗೆ ಹೋಗಿ ಅವರವರ ಮನೆಕೆಲಸಗಳನ್ನು ಗಮನಿಸುವುದರಲ್ಲೇ ಅವರಿಗೆ ಸಾಕಾಗುತ್ತಿತ್ತು.

ಮುಂದೆಲ್ಲಾ ಕಾಂತಳು ಬಂದು ಆಟವಾಡಬೇಕೆಂದು ಹಠ ಹಿಡಿಯುತ್ತಿದ್ದಳು. ಅವಳಿಗೆ ಆಡುವುದಕ್ಕೆ ಸ್ವಲ್ಪವೂ ಗೊತ್ತಿಲ್ಲ. ರಭಸದಿಂದ ಅವಳು ಹೊಡೆದು ಹೊರಗೆ ಕಳುಹಿಸುವ ಚೆಂಡನ್ನು, ಕಾಂಪೌಂಡ್ ಗೋಡೆಯನ್ನು ದಾಟಿ ಆರಿಸಿ ತರುವುದರೊಳಗೆ ನನಗೆ ಸಾಕುಸಾಕೆನಿಸಿಬಿಡುತ್ತಿತ್ತು. ಆದ್ದರಿಂದ ಅವಳಿಗೆ ತಿಳಿಯದಂತೆ ಆ ಆಟದ ವಸ್ತುಗಳನ್ನೆಲ್ಲ ಪಕ್ಕದ ಬೀದಿಯ ವಿದ್ಯಾರ್ಥಿಗಳಿಗೆ ಬಹುಮಾನವಾಗಿ ಕೊಟ್ಟುಬಿಟ್ಟೆ.

ಸೈಕಲನ್ನು ತೆಗೆದುಕೊಂಡು ಹೊರಗೆ ಹೊರಟೆ. ದಾರಿಯಲ್ಲಿ ಸ್ವಾಮಿನಾಥನೂ ಸೀತಾರಾಮನೂ ಒಂದು ಪೆಟ್ಟಿಯಂಗಡಿಯಲ್ಲಿ ನಿಂತಿದ್ದರು. ನನ್ನನ್ನು ಅವರು ಗಮನಿಸಲಿಲ್ಲ. ನಾನೂ ಅವರಿಗಾಗಿ ನಿಲ್ಲದೆ, ಊರನ್ನು

ದಾಟಿ ಕರೂರು ರೋಡಿನ ಕಡೆಗಿದ್ದ ಕಾವೇರಿ ತೀರಕ್ಕೆ ಹೋದೆ. ಮರಳ ದಿಬ್ಬವು ವಿಶಾಲವಾಗಿ ಹಬ್ಬಿತ್ತು. ಉತ್ತರೀಯವನ್ನು ಹಾಸಿಕೊಂಡು ಶಾಂತವಾಗಿ ಮಲಗಿದೆ. ಅಲ್ಲಿ ಪ್ರಶಾಂತತೆ ನೆಲೆಗೊಂಡಿತ್ತು. ಕಾವೇರಿ ಎದುರು ದಡವನ್ನು ಮುಟ್ಟಿ, ಕಮಾನಿನಂತೆ ಬಾಗಿ ಹರಿಯುತ್ತಿತ್ತು.

ನಾರಾಯಣಸ್ವಾಮಿಯವರ ಬಗ್ಗೆಯೂ ಲಲಿತಳ ಬಗ್ಗೆಯೂ ನಾನು ಕೇಳಿದ ಅಪವಾದದ ಮಾತು ನನ್ನ ಮನಸ್ಸಿನಾಳದಲ್ಲಿ ಮುಳ್ಳಿನಂತೆ ಇರಿಯುತ್ತಿತ್ತು. ಮನುಷ್ಯರ ಬಗ್ಗೆ ತಟ್ಟನೆ ಒಂದು ತೀರ್ಮಾನಕ್ಕೆ ಬರುವುದು ಅಷ್ಟು ಸುಲಭವಲ್ಲ. ಮನಸ್ಸಿನ ರೀತಿಯನ್ನು ಮುಖದಲ್ಲಿ ಕಂಡುಹಿಡಿಯಲು ಪ್ರಯತ್ನಿಸುವುದು ಎಂದಿಗೂ ಸಫಲತೆಯನ್ನು ತರುವುದಿಲ್ಲ. ಮನಸ್ಸಿನ ಮಾಲಿನ್ಯವನ್ನು ಮುಖದ ಮೆರುಗಿನಿಂದ ಮರೆಸಲು ಮನುಷ್ಯರು ಕಲಿತು ಬರುತ್ತಿರುವ ಕಾಲವಿದು. ಆದರೆ ಕಾಲದ ಈ ಗುಣಕ್ಕೆ ನಾರಾಯಣಸ್ವಾಮಿ ಶರಣು ಹೊಡೆದವರಲ್ಲ. ಹಸುಗೂಸಿನ ಹೃದಯ ಪಡೆದ, ಕುತೂಹಲ ಸ್ವಭಾವದ ಸಾಧುಜೀವಿ ಅವರು. ಶ್ರೀಮಂತಿಕೆಯಿಂದ ಶೀಲವು ಹೆಚ್ಚುವುದೂ ಉಂಟು; ಕ್ಷೀಣಿಸುವುದೂ ಉಂಟು. ಅವರ ಅಂತಃಕರಣವು ಅವರೊಡನೆ ಕೆಲವು ದಿನಗಳಾದರೂ ಆತ್ಮೀಯವಾಗಿ ಕಳೆದಿದ್ದವರಿಗೇ ಅರಿವಾಗುತ್ತಿತ್ತು.

ಇನ್ನು ನನ್ನ ಗೆಳತಿ ಲಲಿತ:

'ನಮ್ಮ ದಾಂಪತ್ಯ ಜೀವನ ನನಗೆ ಇಂಪಾಗಿದೆ. ನೀವು ನನ್ನ ಬಗ್ಗೆ ಅನುತಾಪಗೊಳ್ಳಬೇಡಿ'

—ಎಂದು ಅವಳು ಒಂದು ದಿನ ಸಂಜೆ ನನಗೆ ಹೇಳಿದ ನುಡಿಗಳು ಈಗ ಮತ್ತೆ ನನ್ನ ಕಿವಿಗಳಲ್ಲಿ ಪ್ರತಿಧ್ವನಿಸಿತು. ಅವಳು ನನಗೆ ತೀರ ಸಮೀಪವಾಗಿ ಆತ್ಮೀಯಳಾಗಿ ಕಂಡರೂ ಅದೇಕೋ ಬಲು ದೂರದಲ್ಲಿ ನಿಂತು ಪರಿಮಳವನ್ನು ಬೀರುವ ಸಂಪಿಗೆಯಂತೆ ನನಗೆ ಗೋಚರಿಸಿದಳು. ಇದುವರೆಗೆ ಅವಳ ನಡೆಯಲ್ಲಾಗಲಿ, ನುಡಿಯಲ್ಲಾಗಲಿ, ಅಥವಾ ನೋಟದಲ್ಲಾಗಲಿ ಯಾವ ಬಗೆಯಾದ ಚಂಚಲತೆಯನ್ನೂ ನಾನು ಕಾಣಲಿಲ್ಲ.

—ಅವಳು ವಂಚಕಿಯೇ ?

ಅವಳ ಹೃದಯ ನನಗೆ ಗೊತ್ತು. ಅದು ಪ್ರೀತಿಯಿಂದ ತುಂಬಿತ್ತು. ಅವಳು ಭಾವಜೀವಿ; ಕಲಾರಸಿಕಳು; ಸುಕುಮಾರ ಸ್ವಭಾವದವಳು. ಜನರ ಸಂಕಟಗಳ ಬಗ್ಗೆಯೂ ಅವಳು ನುಡಿಯುತ್ತಿರುವಾಗ ಅವಳ ಹೃದಯದ ಮಿಡಿತವನ್ನು ಕಂಡು ನಾನು ಹಗಲುಗನಸಿನಲ್ಲಿ ಮುಳುಗಿ ಮೈಮರೆಯುತ್ತಿದ್ದೆ.

ಒಂದು ಸಾರಿ ಅವಳು ನನ್ನನ್ನು ಕೇಳಿದ್ದಳು.

"ಗಂಡಿನ ದುಡಿಮೆಯ ಮೇಲೇ ಹೆಣ್ಣು ಜೀವಿಸುತ್ತಿರುವುದನ್ನು ನಾವು ಹಲವು ಕಡೆಗಳಲ್ಲಿ ಕಾಣುತ್ತೇವಲ್ಲವೆ? ಅವರಿಗೆ ಬೇರೆ ದಾರಿ ಇಲ್ಲವೆ ?"

"ದುಡಿಮೆಯೆಂದರೆ ಕೇವಲ ಹಣಗಳಿಸುವುದು ಮಾತ್ರವಲ್ಲ. ಮನೆಯಲ್ಲೂ ಹೆಣ್ಣು ದುಡಿಯುವುದಿಲ್ಲವೆ ?"

—ಎಂದು ಉತ್ತರಿಸಿದೆ.

"ದುಡಿಯುವವರ ಬಗ್ಗೆ ನಾನು ಹೇಳಲಿಲ್ಲ. ಒಬ್ಬನು ಗಳಿಸಿ ಹತ್ತು ಜನ ಹೆಂಗಸರು ತಿನ್ನಬೇಕಾದ ಪರಿಸ್ಥಿತಿ ಹಲವು ಕಡೆಗಳಲ್ಲಿದೆ. ದುಡಿಮೆಯನ್ನು ಹೀರುವುದೊಂದೇ ಇವರ ಕೆಲಸವಲ್ಲ, ದುಡಿಯುವವನಿಗೆ ಉಪದ್ರವವನ್ನೂ ಕೊಡುತ್ತಿರುತ್ತಾರೆ. ಇದಕ್ಕೆ ದಾರಿ ?"

"ಎಲ್ಲ ಮಹಿಳೆಯರಿಗೂ ಗೌರವದ ವೃತ್ತಿ ಯಾವುದಾದರೂ ಮಾಡಿ ಹಣ ಗಳಿಸಲು ತಿಳಿದಿರಬೇಕು. ಸಮಯ ಬಿದ್ದರೆ ಗಂಡಸರನ್ನು ಎದುರು ನೋಡದೆ ಅವರು ತಮ್ಮನ್ನು ತಾವು ಕಾಪಾಡಿಕೊಳ್ಳಬೇಕು. ವಿದ್ಯೆ ಮತ್ತು ಉದ್ಯೋಗವೇ ಮಹಿಳೆಯರಿಗೆ ನೆರವಾಗುವುದು."

"ನನ್ನ ಹತ್ತಿರ ಒಂದು ಯೋಜನೆಯಿದೆ. ಅದಕ್ಕೆ ಬೇಕಾದ ಏರ್ಪಾಟುಗಳನ್ನೂ ಮಾಡುತ್ತಿದ್ದೇನೆ. ಓದದ ಮಹಿಳೆಯರೂ ಸ್ವಲ್ಪ ಓದಿದ ಮಹಿಳೆಯರೂ ಹೊಲಿಗೆಯ ಕೆಲಸ ಮಾಡಬಹುದಲ್ಲ? ನಾನು ಮಹಿಳೆ

ಯರಿಗಾಗಿ ಒಂದು ದರ್ಜಿಯ ಶಾಲೆಯನ್ನು ತೆಗೆಯುತ್ತೇನೆ. ಕಲಿತಮೇಲೆ ಬೇಕಾದವರಿಗೆ ಹೊಲಿಗೆ ಯಂತ್ರವೂ ತೆಗೆದು ಕೊಡುತ್ತೇನೆ. ಮಹಿಳೆಯರಿಗೆ ಬೇಕಾದ ಉಡುಪುಗಳನ್ನಾದರೂ ಮಹಿಳೆಯರೇ ಹೊಲಿದು ಕೊಡಬಹುದು"

—ಎಂದಳು ಲಲಿತ.

ನನಗೆ ಇದು ಒಳ್ಳೆಯ ಯೋಜನೆಯೆನಿಸಿತು. ಆದರೂ ಹುಡುಗಾಟಕ್ಕೆ

"ಆಮೇಲೆ ಈ ಊರಿನ ದರ್ಜಿಗಳೆಲ್ಲರೂ ನಿಮ್ಮ ಮನೆಯ ಮುಂದೆ ಸತ್ಯಾಗ್ರಹ ಹೂಡುತ್ತಾರೆ"

—ಎಂದೆ.

"ಗಂಡಸರಿಗೆ ಜೀವನೋಪಾಯಕ್ಕೆ ಬೇರೆ ದಾರಿಯಿಲ್ಲವೇ? ನಮ್ಮ ದೇಶದಲ್ಲಿ ಈಗಾಗಲೇ ಹಲವು ಕಡೆ ಮಹಿಳೆಯರು ದರ್ಜಿಯ ಕೆಲಸವನ್ನು ಮಾಡುತ್ತಿದ್ದಾರೆಂಬುದು ನಿಮಗೆ ಗೊತ್ತಿಲ್ಲವೆ?"

—ಎನ್ನುತ್ತಿದ್ದಳು.

ಈ ರೀತಿಯಾಗಿ ಇನ್ನೂ ಲಲಿತಳ ಆಸೆಯಾಕಾಂಕ್ಷೆಗಳೂ, ಕನಸುಗಳೂ, ಯೋಜನೆಗಳೂ ಎಷ್ಟೆಷ್ಟೋ! ಎಲ್ಲವೂ ಇತರರಿಗೆ ಅನುಕೂಲವಾಗುವ ಯೋಜನೆಗಳು. ತನ್ನ ಸುಖವನ್ನೂ, ಬಯಕೆ ಬೇಡಿಕೆಗಳನ್ನೂ, ಶ್ರಮವನ್ನೂ ಅವಳು ತನ್ನನ್ನರಿಯದೆಯಾಗಲಿ ಒಂದು ಬಾರಿಯಾದರೂ ಹೊರಗೆಡವಲಿಲ್ಲ. – ಇವಳು ವಂಚಕಿಯೇ?

ಸಮವಯಸ್ಸಿನ ಗಂಡುಹೆಣ್ಣುಗಳು ಸಮೀಪವರ್ತಿಗಳಾಗಿ ಸಲಿಗೆಯಿಂದಿರಬೇಕಾದರೆ ಈ ದೇಶದಲ್ಲಿ ಅವರು ಒಂದು ಹೊಟ್ಟೆಯಲ್ಲಿ ಹುಟ್ಟಿದವರಾಗಿರಬೇಕು; ಅಥವಾ ಗಂಡಹೆಂಡಿರಾಗಿರಬೇಕು. ಈ ಎರಡು ನಿಯಮಗಳಿಗೂ ಒಳಗಾಗದೆ ಬೇರೆ ಯಾವ ವಿಧವಾದ ಸಂಪರ್ಕವನ್ನೂ ಮನುಷ್ಯರು ಅಂಗೀಕರಿಸುವುದಿಲ್ಲ. ಈ ಎರಡೇ ಬಗೆಯಿಂದ ಮಾತ್ರ ಒಂದು ಹೆಣ್ಣೂ ಗಂಡೂ ಪ್ರೀತಿಯಿಂದ ಒಟ್ಟಿಗೆ ಸೇರಲು ನಿಸರ್ಗ ದಾರಿ ಮಾ ದೆಯೆ? ಗೆಳೆತನವೆಂಬುದು ಗಂಡಿಗೂ ಹೆಣ್ಣಿಗೂ ಮಧ್ಯೆ ಸೇತುವೆಯ ಹಾಗಿರಕೂಡದೇಕೆ?

ನನ್ನ ಎಳೆತನದ ಗೆಳತಿ ಕಸ್ತೂರಿಯ ಕತೆ ನನಗೆ ಜ್ಞಾಪಕಕ್ಕೆ ಬಂತು.

ಐದಾರು ವರ್ಷದ ಬಾಲಕನಾಗಿದ್ದಾಗ ನನಗೆ ಹೆಚ್ಚಾಗಿ ಆಟದ ಗೆಳೆಯರು ಇರಲಿಲ್ಲ. ಅಕ್ಕಪಕ್ಕದ ಮನೆಗಳಲ್ಲೆಲ್ಲ ಅನೇಕವಾಗಿ ಹೆಣ್ಣು ಮಕ್ಕಳೇ ಇದ್ದರು. ಎಷ್ಟೋತ್ತೂ ನಮ್ಮ ಮನೆಗೇ ಬಂದು ನೆಗೆದು ನಾಟ್ಯ ಮಾಡಿಬಿಡುತ್ತಿದ್ದರು. ನಾಲ್ಕು ಬಾಲಿಕೆಯರ ಮಧ್ಯೆ ಸಿಕ್ಕಿ ನರಳುವ ಹುಳು ವಿನ ಹಾಗಿರುತ್ತಿತ್ತು ನನ್ನ ಸ್ಥಿತಿ.

ಯಾವಾಗಲೂ ಇತರ ಬಾಲಿಕೆಯರಿಗಿಂತ ನನ್ನಲ್ಲಿ ಹೆಚ್ಚು ಬಾಧ್ಯತೆ ಮತ್ತು ಸಲಿಗೆಯನ್ನು ತೆಗೆದುಕೊಳ್ಳುತ್ತಿದ್ದವಳೆಂದರೆ ಕಸ್ತೂರಿ. ಆ ಬಾಧ್ಯತೆ ಯನ್ನು ಅವಳ ಸಂಗಾತಿಯರೂ ಆಗ ಒಪ್ಪಿಕೊಂಡರು. ಇದು ಯಾವ ಕಾರಣದಿಂದಲೋ!

ಕಸ್ತೂರಿ ನನಗಿಂತಲೂ ಮೂರು ವರ್ಷ ದೊಡ್ಡವಳು. ಶಾಲೆಯಲ್ಲೂ ಉಚ್ಚ ತರಗತಿಯಲ್ಲಿ ಓದುತ್ತಿದ್ದಳು. ನಾವಿಬ್ಬರೂ ಅಗಲಿರುವ ವೇಳೆ ಬಹು ಕಡಿಮೆ.

ಹತ್ತನೆಯ ಇಯತ್ತೆಯವರೆಗೂ ಓದಿ ಅವಳು ಓದನ್ನು ನಿಲ್ಲಿಸಿದಳು. ಓದಿದ ತಪ್ಪಿಗಾಗಿ ಅವಳಿಗೆ ತಕ್ಕ ವರ ಎಲ್ಲಿ ಹುಡುಕಿದರೂ ಸಿಗಲಿಲ್ಲ. ಓದಿದ ಹುಡುಗರು ಸಿಗುವುದು ಅವಳ ತಂದೆಗೆ ಕುದುರೆಯ ಕೊಂಬಿನಂತೆ ಕಂಡಿತು. ಆದ್ದರಿಂದ ಒಂದೆರಡು ವರ್ಷಗಳು ಅವಳು ಸುಮ್ಮನೆ ಮನೆಯಲ್ಲಿದ್ದಳು.

ನಾನು ಆಗತಾನೆ ಒಂಭತ್ತನೆಯ ಇಯತ್ತೆಯನ್ನು ದಾಟಿದ್ದೆ. ಅವಳಿಗೆ ಮದುವೆ ನಿಶ್ಚಯವಾಗಿರುವುದಾಗಿ ನನ್ನ ತಾಯಿ ಹೇಳಿದ್ದನ್ನು ಕೇಳಿ ಸಂತೋಷದಿಂದ ಅವಳ ಹತ್ತಿರಕ್ಕೆ ಓಡಿದೆ. ಹೇಗಾದರೂ ಅವಳಿಗೆ ಮದುವೆ ಯಾಗದ ಆ ಕೊರತೆಯು ತೀರಬೇಕೆಂಬುದೇ ನನ್ನ ಬಯಕೆ.

“ನಿನಗೆ ಯಾವಾಗ ಕಸ್ತೂರಿ ಮದುವೆ?”

—ಎಂದು ಕೇಳಿದೆ.

ಅವಳು ಉತ್ತರವೀಯದೆ ಮಂಚದ ಒಂದು ಮೂಲೆಯಲ್ಲಿ ಮುದುಗಿ ಕುಳಿತಿದ್ದಳು.

"ಹೇಳುವುದಿಲ್ಲವೆ ಕಸ್ತೂರಿ ?"

"ಬೇಗನೆ ಆಗುತ್ತದೆ."

"ಯಾರು ಮದುವೆಯ ಗಂಡು ?"

"ಯಾರೋ ಒಬ್ಬರು. ಅವರಿಗೆ ಓದುವುದಕ್ಕೆ ಮಾತ್ರ ಗೊತ್ತಿಲ್ಲ; ನಾನೇ ಪಾಠ ಹೇಳಿಕೊಡಬೇಕು !"

—ಎಂದಳು ಬೇಸರದ ಧ್ವನಿಯಲ್ಲಿ.

"ಮದುವೆಗೆ ಸಂಗೀತ ಕಛೇರಿಯೂ, ಬ್ಯಾಂಡು ವಾದ್ಯವೂ ಉಂಟೋ ?"

—ಎಂದೆ ಕುತೂಹಲದಿಂದ.

ಅವಳಿಗೆ ದುಃಖವು ಉಮ್ಮಳಿಸಿ ಬಂತು. ನನ್ನ ತೋಳನ್ನು ಹಿಡಿದುಕೊಂಡಳು. ಅವಳ ಕಣ್ಣುಗಳಲ್ಲಿ ನೀರು ಧಾರಾಕಾರವಾಗಿ ಹರಿಯತೊಡಗಿತು.

"ಏಕೆ ಸೋಮು, ನೀನು ಇನ್ನೂ ಹಸುಗೂಸಾಗೇ ಇದ್ದೀ ?— ಹುಂ, ನಾವಿಬ್ಬರೂ ಯಾವಾಗಲೂ ಎಳೆಯ ಮಕ್ಕಳಾಗೇ ಇದ್ದಿದ್ದರೆ ಎಷ್ಟು ಚೆನ್ನಾಗಿರುತ್ತಿತ್ತು."

ಅವಳು ಬಿಕ್ಕಿ ಬಿಕ್ಕಿ ಅಳುತ್ತಿರುವುದನ್ನು ಕಂಡು ಚಕಿತನಾದೆ. ಮದುವೆಯೆಂದರೆ ಅಳುತ್ತಿರುವ ಅವಳನ್ನು ಕಂಡು ಆಶ್ಚರ್ಯಗೊಂಡೆ.

ಅದರ ನಂತರ ಅವಳು ತವರುಮನೆಗೆ ಬಂದಾಗ ಅವಳನ್ನು ಒಂದೆರಡು ಬಾರಿ ನೋಡಿದ್ದೆ. ಒಂದೊಂದು ಸಲವೂ ಹೆರಿಗೆಗಾಗಿಯೇ ಅಲ್ಲಿಗೆ ಬಂದಿದ್ದಳು. ಅವಳಿಗೆ ಮೂರು ನಾಲ್ಕು ಜನ ಮಕ್ಕಳಾಗಿದ್ದರು.

ಈಗ ನಾನಿರುವ ಇದೇ ಊರಿನಲ್ಲೇ ಅವಳ ಕುಟುಂಬವೂ ಇತ್ತು. ಅವಳ ವಿಳಾಸವನ್ನೂ ನಾನು ತಿಳಿದಿಟ್ಟಿದ್ದೆ. ಅವಳನ್ನು ಮದುವೆಮಾಡಿ

ಕೊಟ್ಟನಂತರ ಅವಳ ತಂದೆ ಕಣ್ಮುಚ್ಚಿದರು. ಹಲವು ಬಾರಿ ನಾನು ಅವಳನ್ನು ನೋಡಿ ಮಾತನಾಡಬಯಸಿದೆ. ಅವಳ ಜೀವನ ಈಗ ಯಾವ ರೀತಿಯಿದೆಯೋ! ಹತ್ತು ಹನ್ನೆರಡು ವರ್ಷಗಳು ಒಂದಾಗಿ, ಒಂದೇ ಹೃದಯದಿಂದ ಕೂಡಿದ್ದ ಅನ್ಯೋನ್ಯತೆಯೆಂದರೆ ಸಾಮಾನ್ಯವೆ.?

ಆದರೆ ಯಾವ ರೀತಿಯಲ್ಲಿ ಅವಳನ್ನು ಸಂಧಿಸುವುದು ಎಂಬ ತೊಡಕಿನಲ್ಲೇ ಹಲವು ತಿಂಗಳುಗಳು ಕಳೆದು ಹೋದವು.

ಕೊನೆಯದಾಗಿ ಒಂದು ದಿನ ಧೈರ್ಯದಿಂದ ಅವಳನ್ನು ಕಾಣಲು ಹೊರಟೆ. ನಾನು ಬರೆದ ಕೆಲವು ಪುಸ್ತಕಗಳನ್ನು ತೆಗೆದುಕೊಂಡು, ಮಕ್ಕಳಿಗೆ ಮಿಠಾಯಿ ಕಟ್ಟಿಸಿಕೊಂಡು ಅವಳ ಮನೆಯ ಕಡೆಗೆ ನಡೆದೆ. ಮನೆಯನ್ನು ಕಂಡುಹಿಡಿಯುವುದು ಬಹಳ ಶ್ರಮದ ಕೆಲಸವಾಗಿತ್ತು. ನನ್ನ ಎಣಿಕೆಯ ಹಾಗೆ ಅವಳು ಒಳ್ಳೆಯ ಮನೆಯಲ್ಲಿ ಒಳ್ಳೆಯ ರೀತಿ ಬಾಳುತ್ತಿರಲಿಲ್ಲ. ಮೊದಲೇ ಐದು ಸಂಸಾರಗಳು ಬೀಡುಬಿಟ್ಟಿದ್ದ ಆ ಹಟ್ಟಿಯಲ್ಲಿ ಇವಳದು ಆರನೆಯ ಸಂಸಾರ. ಆ ಮನೆ, ಆ ಬಾಳು, ಅವಳ ಆ ವೇಷ—ಇದಕ್ಕೆ ಜೀವನವೆಂದು ಹೆಸರೇ? ಅವಳು ಕೊಟ್ಟ ಕಾಫಿ ನನ್ನ ಕರುಳನ್ನು ಕೆರಳಿಸಿತು. ನಗುತ್ತ ಕುಡಿದೆ.

ನನ್ನನ್ನು ಅಲ್ಲೇ ಇದ್ದು ಊಟ ಮಾಡಿಕೊಂಡು ಹೋಗುವಂತೆ ಅವಳು ಹೇಳಲಿಲ್ಲ. ಒಂದು ಹೊತ್ತಿನ ಊಟದ ಸ್ಥಿತಿ ಅಲ್ಲಿ ಹೇಗಿದೆಯೊ? ಅಲ್ಲದೆ ಅವಳು ನನಗೆ ಮಾಡುವ ಉಪಚಾರವನ್ನು ಅವಳ ಗಂಡ ಸಹಿಸುವುದಿಲ್ಲವೇನೋ? ಅವನಿಗೆ ಯಾವುದೋ ಅಂಗಡಿಯೊಂದರಲ್ಲಿ ಕೆಲಸವಂತೆ. ಮಧ್ಯಾಹ್ನ ಊಟಕ್ಕೆ ಬರುತ್ತಾನಂತೆ.

ನಾನು ಅವಳಿಗಾಗಿ ಆಸಕ್ತಿಯಿಂದ ತೆಗೆದುಕೊಂಡು ಹೋದ ಪುಸ್ತಕಗಳನ್ನು ಅವಳಿಗೆ ಕೊಡಲಿಲ್ಲ. ನನ್ನ ಹತ್ತಿರವೇ ಇಟ್ಟುಕೊಂಡೆ. ಚಿಂದಿಯನ್ನುಟ್ಟಿದ್ದ ಅವಳ ಮಕ್ಕಳಿಗೆ ನಾನು ಕಾಸು ಕೊಟ್ಟಾಗ ಅವರು ತೆಗೆದುಕೊಳ್ಳಲು ನಿರಾಕರಿಸಿದರು.

ಪಕ್ಕದ ಮನೆಯುವಳು ನನ್ನ ಬಗ್ಗೆ ಅವಳನ್ನು ಕೇಳುತ್ತಿದ್ದಳು.

"ನನಗೆ ತಮ್ಮನಾಗಬೇಕು"

—ಎಂದು ಹೇಳಿದಳು ಕಸ್ತೂರಿ.

ನಾನು ಅಲ್ಲಿಂದ ಹೊರಟಾಗ,

"ಬೇಗ ಮದುವೆ ಮಾಡಿಕೊಂಡು, ನಿನ್ನ ಹೆಂಡತಿಯನ್ನು ಇಲ್ಲಿಗೆ ಕರೆದುಕೊಂಡು ಬಾ. ಆಮೇಲೆ ನಾನು ನಿನ್ನ ಮನೆಗೆ ಬರುತ್ತೇನೆ"

—ಎಂದಳು ನಗುತ್ತಾ.

ಅಹುದು; ಅಲ್ಲಿಯವರೆಗೆ ನಾನು ಅವಳಲ್ಲಿಗೆ ಹೋಗಬಾರದು. ಹೋಗುವುದೂ ಇಲ್ಲ. ಅವಳೂ ಅದನ್ನು ಬಯಸುವುದಿಲ್ಲ.

ಬಯಸುವುದಿಲ್ಲವೇ !

ಗೆಳೆಯರು ಹಲವು ವರ್ಷಗಳನಂತರ ಭೆಟ್ಟಿಯಾಗಬಹುದು. ಮತ್ತೆ ಅದೇ ಜೋರಿನಲ್ಲಿ ಗೆಳೆತನವನ್ನು ವಿನಿಮಯ ಮಾಡಕೊಳ್ಳಬಹುದು. ನಮಗೆ ಗೆಳೆಯರು ಸಹಕರಿಸುತ್ತಾರೆ; ಅಥವಾ ನಮ್ಮಿಂದ ಸಹಾಯವನ್ನು ಪಡೆಯುತ್ತಾರೆ; ಅದೂ ಇಲ್ಲದೆ ಹೋದರೆ ಕೆಲವರು ನಮ್ಮನ್ನು ವಂಚಿಸು ವುದಕ್ಕಾದರೂ ನೋಡುತ್ತಾರೆ. ಈ ರೀತಿ ಯಾವುದಾದರೂ ಒಂದು ಬಗೆ ಯಲ್ಲಿ ನಮಗೆ ಅವರ ಸಂಪರ್ಕವನ್ನಿಟ್ಟುಕೊಳ್ಳಲಾಗುತ್ತದೆ. ಆದರೆ ಗೆಳತಿಯರು ?

ಕತ್ತಲಾದನಂತರ ನಾನು ಕಾವೇರಿ ತೀರದಿಂದ ಹಿಂದಕ್ಕೆ ಬಂದೆ. ಕೊಠಡಿಯಲ್ಲಿ ದೀಪ ಉರಿಯುತ್ತಿತ್ತು. ಸ್ವಾಮಿನಾಥ ಸಿನಿಮಾ ಹಾಡೊಂದನ್ನು ಉತ್ಸಾಹದಿಂದ ಹಾಡಿಕೊಳ್ಳುತ್ತಿದ್ದ. ನನಗೆ ಅವನನ್ನು ಕಂಡ ತಕ್ಷಣ ಕೋಪ ಬಂತು.

"ನೀನು ಆ ಸೇತುರಾಮನ ಜತೆ ಸೇರುವುದನ್ನು ಬಿಡುವುದಿಲ್ಲವೆ ?"

—ಎಂದೆ.

ಅವನು ಅಣಕವಾಗಿ ನಗುತ್ತಾ,

"ನೀನು ಆ ಲಲಿತಳ ಜತೆ ಸೇರುವುದನ್ನು ನಿಲ್ಲಿಸುವುದಿಲ್ಲವೇ ?"

—ಎಂದು ತಿರುಗಿಸಿ ಕೇಳಿದನು.

ನಾನು ತಿರಸ್ಕಾರದಿಂದ ಅವನನ್ನು ದಿಟ್ಟಿಸಿದೆ.

"ಸಿಟ್ಟಾಗಬೇಡ ಸೋಮು ! ನಾನು ಶ್ರೀಮಂತರೊಡನೆ ಹೆಚ್ಚಾಗಿ ಪಳಗಿದ್ದೇನೆ...."

"ದೆವ್ವಗಳೊಡನೆಯೂ ನೀನು ಪಳಗಬಹುದು."

"ಯಾವ ಮನುಷ್ಯನನ್ನು ಎಷ್ಟರಮಟ್ಟಿಗೆ ಸಾಧನವನ್ನಾಗಿ ಉಪಯೋಗಿಸಿಕೊಳ್ಳಬೇಕು ಎಂಬುದು ಶ್ರೀಮಂತರಿಗೇ ಗೊತ್ತು. ಕಾರ್ಯ ಸಾಧನೆಯಾದ ಬಳಿಕ ಅವನನ್ನು ಕತ್ತು ಹಿಸುಕಿ ಕೊಲ್ಲುವುದಕ್ಕೂ ಹೇಸುವುದಿಲ್ಲ. ಸೀತರಾಮನೊಂದಿಗೆ ನಿನ್ನ ಹಿತಕ್ಕಾಗೇ ನಾನು ಸ್ನೇಹದಿಂದಿರುತ್ತಿರುವುದು."

"ನನ್ನನ್ನು ಕುರಿತು ಚಿಂತಿಸಬೇಡ. ಅವನಿಂದ ನನಗೆ ಯಾವ ಸಹಾಯವೂ ಆಗಬೇಕಾಗಿಲ್ಲ. ನೀನೋ, ಅವನೋ ನನ್ನ ಮಾರ್ಗದಲ್ಲಿ ಅಡ್ಡ ಬರದಿದ್ದರೆ ಅಷ್ಟೇ ಸಾಕು"

—ಎಂದು ಹೇಳಿದೆ, ಬೇಸರಗೊಂಡ ನಾನು.

ಅಂದು ಸಂಜೆ ನನಗೆ ಅಂಚೆಯಲ್ಲಿ ಬಂದಿದ್ದ ಕಾಗದಗಳು ಮೇಜಿನ ಮೇಲಿದ್ದವು. ಒಡೆದು ಓದಿದೆ. ಮದರಾಸಿನಲ್ಲಿ ನನಗೆ ತಿಳಿದ ಸಿನಿಮಾ ಕಂಪೆನಿಯೊಂದರಿಂದ, ಸಿನಿಮಾಗೆ ಕತೆಯನ್ನು ಹೊಂದಿಸಿಕೊಡಬೇಕೆಂದು ಒಂದು ಕಾಗದ ಬಂದಿತ್ತು. ಚಿತ್ರವು ಕೂಡಲೇ ತೆಗೆಯಬೇಕಾಗಿರುವುದರಿಂದ ತಕ್ಷಣ ಹೊರಟು ಬರಬೇಕೆಂದು ಬರೆದಿದ್ದರು. ಅಲ್ಲಿಗೆ ಬಂದು ಒಂದು ತಿಂಗಳಾದರೂ ಇರುವುದಾದರೆ ಬಹಳ ಅನುಕೂಲವೆಂದೂ ತಿಳಿಸಿದ್ದರು.

ನಾನು ಕಾಗದಗಳನ್ನು ಓದಿ ಮುಗಿಸಿದ ನಂತರ,

" ಸೋಮೂ !"

—ಎಂದು ವಿಚಾರಮಗ್ನನಾಗಿ ನನ್ನನ್ನು ಕೂಗಿದ ಸ್ವಾಮಿನಾಥ.

" ಈ ಆಫೀಸಿನಲ್ಲಿ ನನಗೇನಾದರೂ ಕೆಲಸ ಕೊಡಿಸುತ್ತೀಯಾ ?"

—ಎಂದ.

" ಆಟವಾಡುತ್ತಿದ್ದೀಯೇನು ನೀನು ?"

" ಇಲ್ಲ; ನಿಜವಾಗಿ ಹೇಳುತ್ತೇನೆ. ಏನಾದರೂ ಕೆಲಸ ನೋಡ ಬೇಕೆನಿಸುತ್ತದೆ."

" ಕೆಲಸವಿಲ್ಲದೆಯೆ ನೀನು ತುಂಬ ಸಂಪಾದಿಸುತ್ತೀಯಲ್ಲ !– ಇಲ್ಲಿ ನಿನಗೆ ಸಂಬಳ ಸಾಲುತ್ತದೆಯೆ ?"

" ಸಂಬಳವೇ ನನಗೆ ಬೇಕಿಲ್ಲ. ಹೊತ್ತು ಕಳೆದರೆ ಸಾಕು "

—ಎಂದ.

ಮುದ್ರಣಾಲಯದ ಮೇಲ್ವಿಚಾರಣೆಗೆ ಆಗ ಒಬ್ಬರು ಬೇಕಾಗಿತ್ತು. ರಾಮಲಿಂಗಂರವರಿಗೆ ಹೇಳಿ ಏರ್ಪಾಟು ಮಾಡುವುದಾಗಿ ಮಾತು ಕೊಟ್ಟೆ. ಸ್ವಾಮಿನಾಥ ತನ್ನ ಪಾಲಿನ ಕೆಲಸವನ್ನು ನಿರ್ವಹಿಸುವುದರಲ್ಲಿ ಬಲು ಜಾಣ ನೆಂಬುದು ನನಗೆ ಗೊತ್ತಿತ್ತು.

ಮಾರನೆಯ ದಿನದಿಂದ ಸ್ವಾಮಿನಾಥನಿಗೆ ಮುದ್ರಣಾಲಯದಲ್ಲಿ ಕೆಲಸ. ಚಟುವಟಿಕೆಯಿಂದ ಅದನ್ನು ಗಮನಿಸಿ ಬಿಟ್ಟು, ಕಮೀಷನ್ ವ್ಯಾಪಾರವನ್ನೂ ವಿರಾಮವಾಗಿ ನೋಡಿಕೊಳ್ಳುತ್ತಿದ್ದನು.

ಎರಡು ದಿನಗಳಾಯಿತು. ನನ್ನ ಕೊಠಡಿಯಲ್ಲಿ ಹೊಸಾಹೊಸ ಬ್ಯಾಡ್‌ಮಿಂಟನ್ ನೆಟ್, ಚೆಂಡುಗಳು ಮತ್ತಿತರ ಆಟದ ಸಾಮಗ್ರಿಗಳಿದ್ದುವು. ಆಟವಾಡುವುದಕ್ಕೆ ಸ್ವಾಮಿನಾಥ ನನ್ನನ್ನು ಕರೆದ. ನಾನು ಹೋಗಲಿಲ್ಲ. ವಾಯುಸಂಚಾರಕ್ಕೆಂದು ಹೊರಗೆ ಹೊರಟೆ. ಹಿಂದಿರುಗಿ ಬಂದಾಗ ತೋಟದಲ್ಲಿ ಆಟವು ಬಹಳ ಬಿರುಸಿನಿಂದ ನಡೆಯುತ್ತಿತ್ತು. ಬಳಕೆಯಂತೆ

ಕಾಂತಳು ಹಲ್ಲನ್ನು ಕಚ್ಚಿ ಚೆಂಡನ್ನು ಬೀಸಿ ಹೊಡೆದಳು. ಚೆಂಡು ಕಾಂಪೌಂಡನ್ನು ದಾಟಿ ಪಕ್ಕದ ಬಂಗಲೆಯೊಳಗೆ ಬಿತ್ತು. ಸ್ವಾಮಿನಾಥ ಗೋಡೆ ಹತ್ತಿ ಧುಮುಕಿ ಚೆಂಡನ್ನು ಅಲ್ಲಿಂದ ಬೀಸಿದನು!

ಅವನು ಈ ಆಫೀಸಿನಲ್ಲಿ ಕೆಲಸ ಕೇಳಿದ ಲಕ್ಷಣವು ಈಗ ನನಗೆ ಸ್ಪಷ್ಟವಾಯಿತು.

# ೮

ಬೆಳಗ್ಗೆ ಎಂಟು ಗಂಟೆಗೆ ನಾರಾಯಣಸ್ವಾಮಿಯವರು ನನ್ನ ಕೊಠಡಿಯೊಳಕ್ಕೆ ಬಂದುದನ್ನು ಕಂಡು ನನಗೆ ಆಶ್ಚರ್ಯವಾಯಿತು. ಇಷ್ಟು ತಿಂಗಳಿಗೆ ಈಗತಾನೇ ಅವರು ಮೊದಲಬಾರಿಯಾಗಿ ನನ್ನ ಕೊಠಡಿಯೊಳಕ್ಕೆ ಬಂದಿದ್ದಾರೆ. ಅವರು ಹಿಂದೆ ಬಂದಾಗಲೆಲ್ಲಾ ಅನೇಕವಾಗಿ ಸಾಯಂಕಾಲ ವೇಳೆಯಾದ್ದರಿಂದ, ಆಫೀಸ್ ಹೊರ ಅಂಗಣದಲ್ಲೋ ಅಥವಾ ಹಿಂದಿದ್ದ ತೋಟದಲ್ಲೋ ಕುಳಿತು ಮಾತನಾಡುವುದು ಪದ್ಧತಿ. ಅದೂ ಐದು ನಿಮಿಷಗಳಿಗಿಂತಲೂ ಹೆಚ್ಚು ಹೊತ್ತು ನಿಲ್ಲುತ್ತಿರಲಿಲ್ಲ.

"ಬನ್ನಿ, ಮನೆಗೆ ಹೋಗೋಣ"

ಎಂದು ಬಲವಂತದಿಂದ ಕರೆದೊಯ್ಯುತ್ತಿದ್ದರು.

ಸ್ವಲ್ಪ ಹೊತ್ತು ಕುರ್ಚಿಯಲ್ಲಿ ಕುಳಿತಿದ್ದು ಮೆಲ್ಲನೆ ಎದ್ದು ಕೊಠಡಿಯನ್ನು ಸುತ್ತಲೂ ಪರೀಕ್ಷಿಸಿ ನೋಡಿದರು. ಪುಸ್ತಕದ ಕಪಾಟಿನಲ್ಲಿದ್ದ ಪುಸ್ತಕಗಳನ್ನು ನೋಡಿದರು. ಕೊಠಡಿಯ ಒಂದು ಕಡೆಗೆ ದುಂಡಗಿನ ಸಣ್ಣ ಪೀಠದ ಮೇಲಿದ್ದ ಭಗವಾನ್ ಬುದ್ಧರ ಶಿಲಾಮೂರ್ತಿಯನ್ನು ಕಂಡ ತಕ್ಷಣ ಅಲ್ಲೇ ತುಸು ಮೈಮರೆತು ನಿಂತುಬಿಟ್ಟರು. ಆ ಶಿಲೆಗೆ ಸ್ವಲ್ಪ ಮೇಲೆ ಗೋಡೆಯಲ್ಲಿ ನರ್ತಿಸುತ್ತಿರುವ ನಟರಾಜಸ್ವಾಮಿಯ ಚಿತ್ರವಿತ್ತು.

"ಒಂದೇ ಮನೋಧರ್ಮವನ್ನು ಹೊಂದಿರುವವರು ಹಲವು ಕಡೆಗಳಲ್ಲಿದ್ದಾರೆ"

—ಎಂದರು ನಾರಾಯಣಸ್ವಾಮಿ.

ಆಗ ನನಗೆ ಅವರ ಆ ದೊಡ್ಡ ವಾಚನಾಲಯವೂ ಅದರ ಮಧ್ಯೆಯಿದ್ದ ಬುದ್ಧ ವಿಗ್ರಹವೂ ಜ್ಞಾಪಕಕ್ಕೆ ಬಂತು. ಅವರ ಕಪಾಟುಗಳಲ್ಲಿ ಒಂದು ಬುದ್ಧದೇವರ ಕುರಿತಾದ ಗ್ರಂಥಗಳಿಗಾಗಿಯೇ ಪ್ರತ್ಯೇಕಿಸಲ್ಪಟ್ಟಿತ್ತು. ಬರ್ಮಾ, ಸಿಂಹಳ, ಚೀನಾ ಮುಂತಾದ ದೇಶಗಳಿಂದ ಗ್ರಂಥಗಳನ್ನು ತರಿಸಿದ್ದರು.

"ದೇವರ ನೀತಿಯನ್ನು ಮಾತ್ರ ಬುದ್ಧ ಭಗವಾನರು ಅಂಗೀಕರಿಸಿದ್ದರೆ...."

—ಎಂದರು ನಾರಾಯಣಸ್ವಾಮಿ.

"ಆ ಮತವು ಹಿಂದೂಸ್ಥಾನದಲ್ಲಿ ಬೇರು ಬಿಟ್ಟು ನಿಂತಿರುತ್ತಿತ್ತು. ಈಗಲೂ ಸಹ ಇಲ್ಲಿ ಅದು ನಶಿಸಿ ಹೋಗಲಿಲ್ಲ. ಹಿಂದೂ ಮತದ ವೈದಿಕ ಕ್ರೌರ್ಯಗಳನ್ನು ಅಳಿಸಲು ಯತ್ನಿಸಿ, ಒಂದಷ್ಟು ಜಯವೂ ಗಳಿಸಿ, ಆ ಮತದೊಂದಿಗೆ ಒಂದುಗೂಡಿ ಹೋಗಿದೆ.

"ನಿಜ: ನಿಮಗೆ ದೇವರ ನಂಬಿಕೆಯುಂಟೆ?"

"ಉಂಟು! ಭಕ್ತಿಯಲ್ಲೂ ಧ್ಯಾನದಲ್ಲೂ ನನಗೆ ಆಸಕ್ತಿಯುಂಟು."

"ದೈವ ನಂಬಿಕೆಯುಳ್ಳವರು ಹಲವರು ನೀತಿ ನಡತೆ ತಪ್ಪಿ ನಡೆಯುತ್ತಾರೆ! ಅಲ್ಲವೇ?"

—ಎಂದರು.

"ನಂಬಿಕೆಯಿದೆ ಎಂದು ಹೇಳುವವರನ್ನೆಲ್ಲಾ ನಂಬುವುದಕ್ಕೆ ಯೋಗ್ಯರೆಂದು ಹೇಳುವುದಕ್ಕಾಗುವುದಿಲ್ಲ. ಅನೀತಿಗೆ ಅಪ್ಪಣೆ ಚೀಟಿಯನ್ನು ಹಂಚುವ ಅಧಿಕಾರಿಯಲ್ಲ ದೇವರು. ದೈವ ನಂಬಿಕೆಯಿಲ್ಲದವರೆಲ್ಲರೂ ಯೋಗ್ಯರೇ?"

"ನೀವು ಏನು ಭಾವಿಸುತ್ತೀರಿ?"

"ದಯಾರ್ದ್ರ ಹೃದಯ, ಸಭ್ಯತೆ ಮತ್ತು ರಸಿಕತೆ–ಇವನ್ನು ಹೊಂದಿರುವವರು ದೇವರು ಎಂಬ ಒಂದು ಪ್ರತ್ಯೇಕ ಶಕ್ತಿಯನ್ನು ನಂಬದೆ ಹೋದರೂ ದೈವ ನಂಬಿಕೆಯುಳ್ಳವರೇ ಎನ್ನಬೇಕು"

—ಎಂದು ಹೇಳಿದೆ.

ನಾರಾಯಣಸ್ವಾಮಿ ಮತ್ತೆ ನನ್ನ ಬಳಿ ಬಂದು ಕುಳಿತರು. ತಮ್ಮ ಬೆತ್ತವನ್ನು ಮೇಜಿನ ಮೇಲೆ ಹಾಕಿದರು. ಕನ್ನಡಕವನ್ನು ತೆಗೆದು, ಒರೆಸಿ ಮತ್ತೆ ಹಾಕಿಕೊಂಡರು.

"ಇವತ್ತೇ ಅಲ್ಲವೆ ನೀವು ಮದರಾಸಿಗೆ ಹೋಗುವುದು?"

"ಅಹುದು."

"ಮಧ್ಯಾಹ್ನ ನಮ್ಮ ಮನೆಯಲ್ಲಿ ಊಟ. ಅದನ್ನು ನಿಮಗೆ ಹೇಳುವುದಕ್ಕೆ ಬಂದೆ"

—ಎಂದರು ನಾರಾಯಣಸ್ವಾಮಿ.

ನನಗೆ ಇದು ಅನಿರೀಕ್ಷಿತ ಸುದ್ದಿ.

"ವಿಶೇಷವೇನೂ ಇಲ್ಲವಲ್ಲಾ!"

"ನಿಮ್ಮೊಡನೆ ಕುಳಿತು ಊಟ ಮಾಡುವುದು ವಿಶೇಷವಲ್ಲವೆ? ಮತ್ತೆ ಒಂದು ತಿಂಗಳ ನಂತರ ತಾನೇ ನೀವು ಬರುವುದು? ಅದೂ ಅಲ್ಲದೆ ಇವತ್ತು ಲಲಿತಳು ಹುಟ್ಟಿದ ದಿನ."

"ಓಹೋ!"

"ಈ ವರ್ಷವೇ ಅವಳು ಅದನ್ನು ಆಚರಿಸಲು ಒಪ್ಪಿಕೊಂಡಿರುವುದು. ಹೋದ ವರ್ಷ ಅವಳು ಒಪ್ಪಲೇಯಿಲ್ಲ.–ಹನ್ನೆರಡು ಗಂಟೆಗೆಲ್ಲಾ ಕಾರು ಕಳುಹಿಸುತ್ತೇನೆ, ಬಂದುಬಿಡುತ್ತೀರಾ? ಅಲ್ಲಿಯೇ ಇದ್ದು ಸಾಯಂಕಾಲ ಬರಬಹುದು."

"ಕಾರು ಬೇಡ; ನಾನೇ ಬಂದುಬಿಡುತ್ತೇನೆ"

—ಎಂದೆ.

ಆದರೆ ಹೊತ್ತಿಗೆ ಸರಿಯಾಗಿ ಕಾರು ಬಂದುಬಿಟ್ಟಿತು. ಅದರಲ್ಲಿ ಕುಳಿತು ಹೊರಟೆ. ಮನೆಯೊಳಕ್ಕೆ ಹೋಗುತ್ತಿರುವಾಗಲೇ,

"ಬನ್ನಿ"

—ಎಂದು ಮುಗುಳ್ನಗೆಯೊಡನೆ ಸ್ವಾಗತಿಸುತ್ತ ಬಾಗಿಲನ್ನು ತೆಗೆದು ಬಿಟ್ಟಳು ಲಲಿತೆ.

ನಾನು ದಿಗ್ಭ್ರಮೆಗೊಂಡೆ. ಲಲಿತಳೇ ಇವಳು! ಕಾಲುಗಳು ಕ್ಷಣ ಹೊತ್ತು ಆ ಸ್ಥಳವನ್ನು ಬಿಟ್ಟು ಕದಲುವುದಕ್ಕೆ ನಿರಾಕರಿಸಿದವು. ಅವಳೂ ಆ ಕ್ಷಣ ಹೊತ್ತು ಬಂಗಾರದ ಶಿಲೆಯಂತೆ ನನ್ನೆದುರಿನಲ್ಲಿ ನಿಂತಳು. ಬಳಿಕ ನನ್ನ ಕಡೆಗಿದ್ದ ಅವಳ ದೃಷ್ಟಿ ಕೆಳಗೆ ಬಾಗಿತು. ಮುಖವು ಕೆಂಪಾಯ್ತು. ಸ್ವಲ್ಪ ತಡವರಿಸುತ್ತ ಅವಳು ಸರಿದಳು. ನಾನೂ ತಡವರಿಸುತ್ತಲೇ ಮೇಲಕ್ಕೆ ಹೋದೆ. ನನ್ನ ಮನವು ಕೇಳುತ್ತಿತ್ತು,

'ಲಲಿತ! ಏನಿದು?'

—ಎಂದು.

ಈ ರೀತಿ ಲಲಿತಳು ತನ್ನನ್ನು ಅಲಂಕರಿಸಿಕೊಂಡು ನನ್ನೆದುರಿನಲ್ಲಿ ನಿಲ್ಲುತ್ತಾಳೆಂದು ನಾನು ಕನಸು ಮನಸಿನಲ್ಲೂ ತಿಳಿದಿರಲಿಲ್ಲ. ಭಾರತಿ ಯವರು ಬರೆದ ಜ್ಞಾನರಥದಲ್ಲಿ ಅವರ ಕನಸಿನ ಬೀಡಾದ ಗಂಧರ್ವಲೋಕ ದಲ್ಲಿ ವಿಹರಿಸಿದ್ದೇನೆ. ಷೇಕ್ಸ್‌ಪಿಯರ್ ಕವಿಯ 'ಬೇಸಿಗೆ ರಾತ್ರಿಯ ಕನಸಿ' ನಲ್ಲಿ ಬರುವ ಮೋಹಕ ಹೂದೋಟದಲ್ಲೂ ಅಲೆದಾಡಿದ್ದೇನೆ. ಅಲ್ಲೆಲ್ಲೂ ಕೂಡ ಈ ಲಲಿತಳಂಥಾ ಹೆಣ್ಣನ್ನು ನಾನು ಕಾಣಲಿಲ್ಲ. ಕರಿನೀಲ ಬಣ್ಣ ದಲ್ಲಿ ಥಳಥಳಿಸುತ್ತಿದ್ದ ಸಿಲ್ಕ್ ಸೀರೆಯನ್ನುಟ್ಟಿದ್ದಳು. ಅಮಾವಾಸ್ಯೆಯ ರಾತ್ರಿಯಲ್ಲಿ ಆಕಾಶದಲ್ಲಿ ಮಿನುಗುವ ನಕ್ಷತ್ರಗಳಂತೆ ಬಿಳಿಯ ಚುಕ್ಕೆಗಳು ಆ ಸೀರೆಯನ್ನೆಲ್ಲ ಆವರಿಸಿತ್ತು. ದೇಹಕ್ಕೆ ಅಂಟಿಕೊಂಡ ಹಾಗೆ ಬಿಗಿಯಾಗಿ

ಹಸುರು ಬಣ್ಣದ ಕುಪ್ಪಸ ಧರಿಸಿದ್ದಳು. ಅವಳ ಬೆನ್ನಿನ ಕಡೆಗಿದ್ದ ಕುಪ್ಪಸದ ಭಾಗದಲ್ಲಿ ನಕ್ಕೀ ಕೆಲಸ ಮಾಡಿದ ನೂಲಿನ ಎಳೆಗಳು ಓಡಿದ್ದುವು. ನನ್ನ ಮುಂದೆ ಅವಳು ವೇಗವಾಗಿ ನಡೆದಳು. ಆಗ ಅವಳು ಹೆಣೆದಿದ್ದ ಜಡೆ ಲಾಸ್ಯವಾಡುತ್ತಿತ್ತು. ಅವಳ ತಲೆಯಲ್ಲಿ ಬಿಳಿ ಮತ್ತು ಕೆಂಪಾಗಿ ಕನಕಾಂಬರವೂ ಮಲ್ಲಿಗೆಯೂ ಜೊತೆ ಸೇರಿ ಮನೆ ಮಾಡಿದ್ದವು.

ಪಕ್ಕದ ಕೋಣೆಗೆ ಅವಳು ನುಗ್ಗಿ ಮರೆಯಾದನಂತರ ನಾನು ತಗ್ಗಿಸಿದ ತಲೆಯನ್ನು ಎತ್ತದೆ ಮುಂದಕ್ಕೆ ನಡೆದೆ. ನನ್ನ ಮನಸ್ಸು ನನ್ನಲ್ಲಿರ ಲಿಲ್ಲ; ಅದು ಲಲಿತಳ ಬಳಿಯೂ ಇಲ್ಲ; ಸುತ್ತಲೂ ಶೂನ್ಯವಾವರಿಸಿತ್ತು. ಆ ಭಯಂಕರ ಸನ್ನಿವೇಶದಲ್ಲಿ, ನಾನು ಏನು ಮಾಡುತ್ತಿದ್ದೇನೆಂಬ ಅರಿವೂ ಇಲ್ಲದೆ ತೋಟದ ಕಡೆಗಿದ್ದ ಕೊಟ್ಟಿಗೆಯಲ್ಲಿ ಹೋಗಿ ಕುಳಿತೆ. ಮುಖವೆಲ್ಲವೂ ಒಂದೇ ಸಮನೆ ಬೆವರುತ್ತಿತ್ತು.

"ಅಪ್ಪಪ್ಪಾ! ಅಸಾಧ್ಯ ಬಿಸಿಲು"

—ಎಂದು ಹೇಳಿಕೊಂಡೇ ಬಂದು ಸೇರಿದರು ನಾರಾಯಣಸ್ವಾಮಿ. ಫ್ಯಾನನ್ನು ನನ್ನ ಬಳಿಗೆ ಸರಿಸಿ ತಿರುಗಿಸಿದರು. ವಿದ್ಯುಚ್ಛಕ್ತಿಯ ಈ ಬೀಸಣಿಗೆಯಿಂದ, ನನ್ನ ಹೃದಯ ತಾಪವನ್ನು ತಣಿಸಲು ಸಾಧ್ಯವೇ? ಅಂತಃಕರಣದ ಸೊದೆಯನ್ನು ಉಣಬಡಿಸಲಾಗುವುದೇ? ಪ್ರೀತಿಯ ಮಂದ ಮಾರುತವನ್ನು ಪಸರಿಸಲಾಗುವುದೆ?

ಊಟ ನಡೆಯುತ್ತಿತ್ತು.

"ಇವತ್ತು ಲಲಿತಳ ಮೇಲ್ವಿಚಾರಣೆಯಲ್ಲೇ ಅಡಿಗೆ ನಡೆಯಿತು. ಎಲ್ಲವನ್ನೂ ತಾನೇ ಖುದ್ದಾಗಿ ಗಮನಿಸಿದಳು"

—ಎಂದರು ನಾರಾಯಣಸ್ವಾಮಿ.

ಅಡಿಗೆ ಹೇಗಿತ್ತು ಎಂದು ನನಗೆ ಗೊತ್ತಾಗಲಿಲ್ಲ. ಯಾವುದನ್ನೂ ನಾನು ರುಚಿ ನೋಡಿ ತಿನ್ನಲಿಲ್ಲ. ನನ್ನ ಬಾಯಿ ರುಚಿ ಕೆಟ್ಟಿತ್ತೆಂದು

ಹೇಳಲೇ? ನನಗೆಲ್ಲವೂ ಒಂದೇ ತರಹವಾಗಿತ್ತು. ಸಾಂಬಾರು, ತಿಳಿಸಾರು, ಹಪ್ಪಳ, ಪಾಯಸ....

"ಇನ್ನೂ ಸ್ವಲ್ಪ ಪಾಯಸ ಹಾಕಿಕೊಳ್ಳಿ"

—ಎಂದಳು ಲಲಿತ.

ಆಗಲೇ ನಾನು ಪಾಯಸ ಹೀರುತ್ತಿರುವುದು ನನ್ನ ಗಮನಕ್ಕೆ ಬಂತು.

"ಬೇಡಿ....ಇಲ್ಲ....ಸಾಕು!"

"ತೆಗೆದುಕೊಳ್ಳಿ ಸೋಮು, ಇವತ್ತು ಬಹಳ ಚೆನ್ನಾಗಿದೆ!"

—ಎಂದರು ನಾರಾಯಣಸ್ವಾಮಿ.

"ಸ್ವಲ್ಪ ತೆಗೆದುಕೊಳ್ಳಿ"

—ಎಂದು ಪಾಯಸವನ್ನು ಎಲೆಯ ತುಂಬ ಸುರಿದಳು ಲಲಿತ.

"ಸೋಮುವಿಗೆ ಈಗಲೇ ಮದರಾಸಿನ ಜ್ಞಾಪಕ ಬಂತೆಂದು ಕಾಣುತ್ತದೆ. ಸಿನಿಮಾ ಕತೆಯನ್ನು ಈಗಲೇ ಯೋಚಿಸಿ, ರೂಪಿಸಿ, ಮುಗಿಸಿಬಿಡುತ್ತಾರೆಂದು ತೋರುತ್ತದೆ. ನಮ್ಮೊಡನೆ ಸರಿಯಾಗಿ ಮಾತನಾಡುವುದೂ ಕಷ್ಟವಾಗಿದೆ ಅವರಿಗೆ, ಅಲ್ಲವೆ ಲಲಿತ!"

—ಎಂದರು ನಾರಾಯಣಸ್ವಾಮಿ ನಗುತ್ತಾ.

"ನನ್ನ ತಪ್ಪನ್ನು ಈಗ ನಾನು ಅರಿತುಕೊಂಡೆ. ಭಾವುಕನಾಗಿರುವುದರಿಂದ ಎಷ್ಟು ತೊಂದರೆಯುಂಟಾಗುತ್ತದೆ ಗೊತ್ತೆ? ಒಂದು ಅಲ್ಪ ಸಂಭವದಿಂದ ಮನಸ್ಸನ್ನು ಇಷ್ಟು ದೂರ ಅಲೆಯಬಿಟ್ಟೆನಲ್ಲ!"

"ಹಾಗೇನಿಲ್ಲ; ಕತೆಯ ಯೋಚನೆಯೇ ನನಗಿಲ್ಲ. ಅಡಿಗೆ ಬಹಳ ಚೆನ್ನಾಗಿದೆ. ಆ ರುಚಿಯನ್ನು ಅನುಭವಿಸಿ ಚಪ್ಪರಿಸುತ್ತ ತಿನ್ನುತ್ತಿದ್ದೆ"

—ಎಂದೆ ನನ್ನ ಮೇಲಿನ ಆರೋಪವನ್ನು ಹೋಗಲಾಡಿಸಿಕೊಳ್ಳುವುದಕ್ಕೂ ಮತ್ತು ಆ ಆತ್ಮೀಯ ಬಂಧುಗಳ ಪ್ರೀತ್ಯರ್ಥದ ಸಲುವಾಗಿ.

"ನಿನ್ನೆ ಸಾಯಂಕಾಲ ನಾನೂ ಲಲಿತಳೂ ಅಂಗಡಿ ಬೀದಿಗೆ ಹೋಗಿದ್ದೆವು. ಲಲಿತಳಿಗೂ ಇಷ್ಟೊಂದು ಜವಳಿಯ ಹುಚ್ಚು ಇದೆಯೆಂದು ನಿನ್ನೆ

ತಿಳಿದುಕೊಂಡೆ. ನನ್ನನ್ನು ಇಪ್ಪತ್ತು ಅಂಗಡಿಗಳ ಮೆಟ್ಟಲುಗಳನ್ನು ಹತ್ತಿಸಿ, ಇಳಿಸಿ ಬಿಟ್ಟಳು! ಆದರೂ ಶ್ರಮವು ವಿಫಲವಾಗಲಿಲ್ಲ. ನೀವೇ ನೋಡಿ; ಹುಟ್ಟಿದ ಹಬ್ಬದ ಉಡುಪು ಇದಕ್ಕಿಂತಲೂ ಸಮಂಜಸವಾಗಿ ಲಲಿತಳಿಗೆ ಸಿಗುವುದೆ?"

—ಎಂದರು.

ಅವಳನ್ನು ಪರಿಕಿಸಿ ನೋಡದೆಯೇ

'ಬಹಳ ಸುಂದರವಾಗಿದೆ'

—ಎಂದು ಹೇಳಬಯಸಿದೆ.

ಆದರೆ ನಾರಾಯಣಸ್ವಾಮಿಯಾದರೋ ಘಾಟಿ ಮುದುಕರು.

'ಪತ್ರಿಕಾ ಸಂಪಾದಕರೆನ್ನುವುದನ್ನು ನೀವು ಬಹಳ ಚೆನ್ನಾಗಿ ತೋರಿಸಿಕೊಂಡು ಬಿಟ್ಟಿರಲ್ಲ! ಪುಸ್ತಕವನ್ನೋದದೆಯೇ ಮುನ್ನುಡಿ, ಪ್ರಶಂಸೆಗಳನ್ನು ಬರೆಯುವ ಆ ಪದ್ಧತಿಯನ್ನು ತೋರಿಸಿಯೇ ಬಿಟ್ಟಿರಿ!'

ಎಂದು ಅಳುಕದೆ ನನ್ನನ್ನು ಕೇಳಿಬಿಡುತ್ತಾರೆ. ಆದ್ದರಿಂದ ನಾನು ಎದುರಿನಲ್ಲಿ ನಿಂತ ಲಲಿತಳನ್ನು ನೋಡಿದೆ.

"ಚೆನ್ನಾಗಿದೆ"

—ಎಂದೆ.

ಅವಳು ತನ್ನೊಳಗೇ ನಗುತ್ತಿದ್ದಳು.

"ಕಾಮನಬಿಲ್ಲಿನ ಬಣ್ಣದಲ್ಲಿ ಸೀರೆಯನ್ನು ತೆಗೆದುಕೊಳ್ಳುವಂತೆ ಹೇಳಿದೆ. ಅವಳು "ನೀಲಿಯಾಕಾಶದ ಸೊಬಗೇ ನನಗೆ ಹೆಚ್ಚಾಗಿ ಹಿಡಿಸುತ್ತದೆ"

—ಎಂದಳು.

"ಹೆಂಗಸರಿಗೂ ಎಷ್ಟು ಕಲಾಭಿರುಚಿಯಿದೆ ನೋಡಿ! 'ಕಲೆ' ಎಂದರೆ ಬಟ್ಟೆ ಎಂಬ ಅರ್ಥದಲ್ಲಿ ಹೇಳುತ್ತಿದ್ದೇನೆ. ತಮ್ಮ ಚೆಲುವು ಯಾವ ಯಾವ ಜವಳಿಯಂಗಡಿಗಳಲ್ಲಿ, ಸರಾಫಿನ ಅಂಗಡಿಯಲ್ಲಿ, ಪೌಡರ್ ಡಬ್ಬಿಯೊಳಗೆ

ಅವಿತು ಕುಳಿತಿದೆಯೆಂಬುದನ್ನು ಅವರು ಎಷ್ಟು ಸೂಕ್ಷ್ಮವಾಗಿ ಪರಿಶೋಧಿಸಿ ತಿಳಿದಿಟ್ಟಿದ್ದಾರೆ!"

—ಎಂದರು.

ನಾರಾಯಣಸ್ವಾಮಿಯವರ ಉತ್ಸಾಹವು ಅಂದು ಎಂದಿಗಿಂತಲೂ ಹೆಚ್ಚಾಗಿತ್ತು. ಅವರೇ ಮುಂದುವರೆಸಿ ಹೇಳಿದರು.

"ಲಲಿತಳನ್ನು ಇಷ್ಟು ದಿನ ನಾನು ಆಧುನಿಕ ಹೆಣ್ಣೆಂದು ಭಾವಿಸಿರಲೇ ಇಲ್ಲ. ಎಷ್ಟು ಹೇಳಿದರೂ ತನ್ನನ್ನು ಸರಿಯಾಗಿ ಅಲಂಕರಿಸಿಕೊಳ್ಳುತ್ತಿರಲಿಲ್ಲ. ಅವಳ ಈ ಜನ್ಮದಿನ ಬಾಳಲಿ!–ಪ್ರತಿ ತಿಂಗಳೂ ಹೀಗೆ ಅವಳಿಗೆ ಹುಟ್ಟಿದ ಹಬ್ಬಗಳು ಬಂದರೆ, ನಮಗೆ ಮೃಷ್ಟಾನ್ನ ಭೋಜನ ಮತ್ತು ನೇತ್ರಾನಂದಗಳಿಗೆ ಕೊರತೆಯಿಲ್ಲ....ಅಲ್ಲವೆ ಲಲಿತ!"

—ಎಂದು ಅವಳ ಕಡೆ ಕುಚೋದ್ಯವಾಗಿ ನೋಡಿ ನಕ್ಕರು.

ಊಟವಾದ ನಂತರ ನಾವಿಬ್ಬರೂ ವಿಶ್ರಾಂತಿಗೆಂದು ಮಹಡಿಯ ಮೇಲಿನಕೊಠಡಿಗೆ ಹೋಗಿ ಕುಳಿತೆವು. ತಾಂಬೂಲ ಹಾಕಿಕೊಂಡೆವು. ಅದು ನಾರಾಯಣಸ್ವಾಮಿಯವರ ಕೊಠಡಿ. ಆ ಜಾಗವೆಲ್ಲವೂ ಘಮಘಮವೆಂದು ಸುಗಂಧ ಪರಿಮಳ ಬೀಸುತ್ತಿತ್ತು. ಸಂಪಿಗೆ ಹೂವಿನ 'ಸೆಂಟ'ನ್ನು ಅವರು ಯಾವಾಗಲೂ ಉಪಯೋಗಿಸುವ ಪದ್ಧತಿಯಾದ್ದರಿಂದ ಅದರ ತಿಳಿ ವಾಸನೆಯು ಅಲ್ಲಿದ್ದ ಎಲ್ಲ ಸಾಮಗ್ರಿಗಳಿಗೂ ಸೋಂಕಿತ್ತು.

"ಕಲೆಯು ಕಲೆಗಾಗಿಯೇ ಎಂದು ಹೇಳುತ್ತಾರಲ್ಲ, ನಿಮ್ಮ ಅಭಿಪ್ರಾಯವೇನು?"

—ಎಂದು ಆರಂಭಿಸಿದರು.

"ಹಾಗೆಂದು ಹೇಳುವವರು ಈಗ ಯಾರೂ ಇರುವುದಿಲ್ಲ"

—ಎಂದೆ.

"ಹಾಗಾದರೆ ನೀವು ನಮ್ಮ ಪಕ್ಷಕ್ಕೆ ಸೇರಿದವರು. ಜೀವನಕ್ಕಾಗಿ ತಾನೇ ಕಲಿಯಿರುವುದು ?"

"ಅಹುದು."

"ಸ್ವಲ್ಪ ತಾಳಿ; ಇಗೋ ಬಂದುಬಿಡುತ್ತೇನೆ"

—ಎಂದು ಬೇಗನೆ ಕೆಳಗಿಳಿದು ಹೋದರು.

ನನಗೆ ಆಗ ಲಲಿತಳು ಉಟ್ಟಿದ್ದ ಸೀರೆಯ ನೆನಪು ಬಂತು; ತಿಳಿನೀಲಿ ಬಣ್ಣದ ಆ ಸೀರೆ, ಅದರ ಮೇಲಿನ ಆ ಚುಕ್ಕೆಗಳು, ನಿರ್ಮಲಾಗಸದಲ್ಲಿ ಮಿನುಗುವ ನಕ್ಷತ್ರಗಳಂತೆ ಹೊಳೆಯುತ್ತಿದ್ದುವು. ಆ ಉಡುಪಿನಲ್ಲಿ ಅವಳು ದೇವಲೋಕದ ಸುಂದರಿಯಂತೆ ಕಂಗೊಳಿಸುತ್ತಿದ್ದಳು.

"ಎಲ್ಲಿ ಅವರು ?"

ತಿರುಗಿ ನೋಡಿದೆ. ಲಲಿತಳು ಬಾಗಿಲ ಬಳಿ ನಿಂತಿದ್ದಳು.

"ಇಗೋ ಬಂದುಬಿಡುತ್ತಾರೆ"

—ಎಂದೆ.

"ಸಿನಿಮಾ ಪ್ರಪಂಚಕ್ಕೆ ಹೋಗುತ್ತೀರೇನೋ !"

—ಎಂದು ತನ್ನೊಳಗೇ ಹೇಳಿಕೊಳ್ಳುವವಳಂತೆ ಹೇಳಿಬಿಟ್ಟು ಪಕ್ಕದ ಸೋಫಾದಲ್ಲಿ ಒರಗಿದಳು.

"ಹೋಗಿ ಬರಲು ಒಂದು ತಿಂಗಳಾಗುವುದೇ ?"

"ಆಗುತ್ತದೆ."

"ಸಿನಿಮಾ ಪ್ರಪಂಚವು ಮಿರುಗುವ ಸ್ಥಳ, ಹೊಳೆಯುವ ನಕ್ಷತ್ರಗಳು ಅಲ್ಲಿ ಹೆಚ್ಚು !"

—ಎಂದು ಅವಳು ಮೃದುವಾಗಿ ನಕ್ಕಳು.

"ಇದ್ದರೇನಂತೆ ! ನಕ್ಷತ್ರಗಳ ಸಂಪರ್ಕವೇ ನನಗಿರುವುದಿಲ್ಲ. ಏಕಾಂತ ಸ್ಥಳವೂ ಬಿಳಿಯ ಹಾಳೆಗಳೂ ತಾನೇ ನನಗೆ ಬೇಕಾಗಿರುವುದು."

"ಆದರೂ ಅದು ಕಲಾ ಪ್ರಪಂಚ...."

"ಹುಷಾರಾಗಿರಬೇಕಾದ ಸ್ಥಳವೇ ಅನ್ನಿ !"

—ಎಂದೆ.

ಅದಕ್ಕೆ ಮೇಲೆ ಅವಳು ಏನೂ ಹೇಳಲಿಲ್ಲ. ತನ್ನ ಬಲಗಾಲಿನ ಹೆಬ್ಬೆರಳಿನಿಂದ ನೆಲದಲ್ಲಿ ಗೆರೆಗಳನ್ನು ಗೀಚುತ್ತ ಅದನ್ನೇ ತಮಾಷೆ ನೋಡುತ್ತ ಕುಳಿತಿದ್ದಳು. ಕೆಲವು ನಿಮಿಷಗಳಾದ ಮೇಲೆ ತಲೆಯೆತ್ತಿ ನೆಟ್ಟಗೆ ಕುಳಿತಳು. ತಲೆಯನ್ನು ತಿರುಗಿಸಿ ನನ್ನನ್ನು ತೀಕ್ಷ್ಣವಾಗಿ ನೋಡಿ ಬಿಟ್ಟು ತಗ್ಗಿಸಿದಳು.—ಆ ನೋಟ! ಇಷ್ಟು ತಿಂಗಳು ಇಲ್ಲದ ಈ ಚಂಚಲತೆ ಇಂದೇಕೆ ಇವಳಿಗೆ ?

ಅದಕ್ಕೆ ಮೇಲೆ ಅಲ್ಲಿ ಕುಳಿತಿರಲು ನನ್ನಿಂದ ಸಾಧ್ಯವಾಗದೆ ಹೋಯಿತು. ಒಂದು ನಾನು ಹೊರಗೆ ಹೋಗಬೇಕು; ಅಥವಾ ಅವಳು ಹೋಗಬೇಕು. ಮೊದಲೇ ಅಲ್ಲಿ ನೆಲೆಸಿದ್ದ ಸಂಪಿಗೆಯ ಪರಿಮಳದೊಂದಿಗೆ, ಅವಳು ಮುಡಿದಿದ್ದ ಮಲ್ಲಿಗೆಯ ಪರಿಮಳವೂ ಸೇರಿ ನನ್ನನ್ನು ಹೇಗೇಗೋ ಮಾಡುತ್ತಿದ್ದುವು. ಒಳ್ಳೆಯ ಸಮಯಕ್ಕೆ ಒಂದು ಪುಸ್ತಕ ಕಟ್ಟನ್ನು ಹೊರ ಲಾರದೆ ಹೊತ್ತುಕೊಂಡು ಆಗ ನಾರಾಯಣಸ್ವಾಮಿ ಅಲ್ಲಿ ಬಂದು ಸೇರಿದರು.

"ಸಿನಿಮಾದಲ್ಲಿ ಮೊದಲಿಗೆ ಪುರಾಣ ಪ್ರಚಾರ ಸಾಗುತ್ತಿತ್ತು; ಈಗ ಪಕ್ಷ, ಪ್ರತಿ ಪಕ್ಷಗಳ ಪ್ರಚಾರ ಬಿರುಸಿನಿಂದ ಸಾಗಿದೆ; ಇನ್ನು ಮೇಲೆ 'ಪ್ರೀತಿ'ಯ ಪ್ರಚಾರ ಸಾಗಲಿ!— ನೀವು ಇದನ್ನು ಮಾಡಬಹುದಲ್ಲ"

—ಎಂದರು.

"ಧಾರಾಳವಾಗಿ ಮಾಡುತ್ತೇನೆ."

"ಅಶೋಕನ ಕಾಲದಲ್ಲಿ ದೇಶವು ಸುಭಿಕ್ಷವಾಗಿತ್ತೆಂದರೆ ಅದಕ್ಕೆ ಕಾರಣ ಬುದ್ಧನ ತತ್ವಗಳೇ ಅಲ್ಲವೆ ? ಈ ಗ್ರಂಥಗಳನ್ನು ನಿಮ್ಮ ಜತೆ ಮದರಾಸಿಗೆ ತೆಗೆದುಕೊಂಡು ಹೋಗಿ. ಓದಿಬಿಟ್ಟು ಬೇಕಾದ ಕಡೆಯಲ್ಲಿ ಬುದ್ಧನ ತತ್ವ ಗಳನ್ನು ಪ್ರಚಾರ ಮಾಡಿ"

—ಎಂದರು ನಾರಾಯಣಸ್ವಾಮಿ.

ಅವರು ಪ್ರೀತಿಯಿಂದ ಕೊಟ್ಟ ಒಂಭತ್ತು ಪುಸ್ತಕಗಳನ್ನು ಭದ್ರವಾಗಿ ತೆಗೆದುಕೊಂಡೆ. ಅವುಗಳಲ್ಲಿ ಒಂದನ್ನು ಮಾತ್ರ ಸರಿಯಾಗಿ ಓದಿ ಮುಗಿಸ ಬೇಕಾದರೆ ಒಂದು ತಿಂಗಳೂ ಸಾಲದು! ಸ್ವಲ್ಪ ಹೊತ್ತು ಮಾತನಾಡಿ ಕೊಂಡಿದ್ದು ಹೊರಟೆ. ಗಂಡ, ಹೆಂಡಿರಿಬ್ಬರೂ ಬಾಗಿಲವರೆಗೂ ಬಂದು ನನ್ನನ್ನು ಕಳುಹಿಸಿಕೊಟ್ಟರು.

"ಬರುತ್ತೇನೆ."

"ಹೋಗಿ ಬನ್ನಿ"

—ಎರಡು ಕಂಠಗಳೂ ಒಂದಾಗಿ ಮೊಳಗಿತು.

ಬರುವಾಗ ಲಲಿತಳ ಮುಖವನ್ನು ದಿಟ್ಟಿಸಲು ನನಗೆ ಧೈರ್ಯವಾಗ ಲಿಲ್ಲ. ಆದರೆ ಸ್ವಲ್ಪ ದೂರ ಬಂದಮೇಲೆ ತಿರುಗಿ ನೋಡಿದೆ. ಅಲ್ಲಿ ನಾರಾಯಣಸ್ವಾಮಿ ಈಗ ಕಾಣಲಿಲ್ಲ. ಲಲಿತಳು ಮಾತ್ರ ಬಾಗಿ ನೋಡು ತ್ತಿದ್ದಳು. ಅವಳ ಕಣ್ಣುಗಳಲ್ಲೇಕೆ ಈ ವ್ಯಥೆ!

# ೯

ಮದರಾಸಿನಲ್ಲಿ ಕೈತುಂಬ ಕೆಲಸವಿತ್ತು. ಹತ್ತು ದಿನಗಳು ಬಿಡುವಿಲ್ಲದೆ ಬರೆದು ಚಿತ್ರ ಕತೆಯ ಒಂದು ಭಾಗವನ್ನು ಮುಗಿಸಿದೆ. ಇದರ ಮಧ್ಯೆ ಆ ತಿಂಗಳಿನ 'ತಾವರೆ'ಗೆ ಒಂದು ಸಣ್ಣ ಕತೆಯನ್ನು ಬರೆಯಬೇಕಾಗಿತ್ತು. ತಿರುಚ್ಚಿಯಿಂದ ಹೊರಡುವಾಗ, ಮದರಾಸಿನಲ್ಲಿ ಬಿಡುವು ದೊರೆತಾಗ ಬರೆದು ಕಳುಹಿಸಿಬಿಡೋಣವೆಂದುಕೊಂಡಿದ್ದೆ. ಆದರೆ ಅಲ್ಲಿ ಹೊಸ ಕಲ್ಪನೆಗೆ ಅವಕಾಶವೇ ಇಲ್ಲದಂತಾಯ್ತು. ಎದುರಿನಲ್ಲಿ ಬೆಟ್ಟದಂತೆ ನಿಂತಿರುವ ಕೆಲಸವನ್ನು ಮುಗಿಸಲು ರಾತ್ರಿಯೆಲ್ಲಾ ನಿದ್ದೆಗೆಟ್ಟು ದುಡಿಯಬೇಕಾಯಿತು. ಸಣ್ಣ ಕತೆ ಬರೆಯದೆ ಇರಲೂ ಆಗಲಿಲ್ಲ. ಸಹಸಂಪಾದಕ ಶಂಕರನ್‌ರವರಿಂದ ಆಗಲೇ ಕತೆಗಾಗಿ ಎರಡು ಕಾಗದಗಳು ಬಂದವು. ಅಚ್ಚುಕೂಟ ಅದಕ್ಕಾಗಿ ಕಾದಿದೆಯೆಂದು ಬರೆದಿದ್ದರು.

ಬೇರೆ ದಾರಿ ಕಾಣದೆ ಯಾವ ಕತೆಯನ್ನು ಇಷ್ಟು ದಿನಗಳೂ ಬರೆಯಕೂಡದೆಂದು ನನ್ನ ಮನಸ್ಸಿನ ಒಂದು ಮೂಲೆಯಲ್ಲಿ ಹುದುಗಿಸಿಟ್ಟಿದ್ದೆನೋ ಅದೇ ಕತೆಯನ್ನು ಅವಸರದಲ್ಲಿ ಬರೆದು ಕಳುಹಿಸಿದೆ. ಮೊದಲು ನಾನು ತಿಳಿಸಿದ್ದ ನನ್ನ ಬಾಲ್ಯ ಗೆಳತಿ ಕಸ್ತೂರಿಯ ಕತೆ ಅದು. ನಡೆದ ಸಂಭವಗಳನ್ನು ಹೆಚ್ಚು ಮಾರ್ಪಡಿಸದೆ ಹಾಗೇ ಇರಿಸಿದ್ದೆ. 'ನೆನಹು' ಎಂಬ ಶಿರೋನಾಮದೊಂದಿಗೆ ಕತೆಯು ಅಂಚೆಯಲ್ಲಿ ತಿರುಚ್ಚಿಗೆ ಹೋಯಿತು.

ಈ ಹತ್ತು ದಿನಗಳಲ್ಲಿ ಎಲ್ಲರಿಂದಲೂ ಕಾಗದಗಳು ಬಂದವು. ಮೊದಲನೆಯ ಕಾಗದ ಕಾಂತಳದು.

ಪ್ರೀತಿಯ ಅಣ್ಣ,
ನಮಸ್ಕಾರ.

ನಿಮ್ಮ ಗೆಳೆಯ ಸ್ವಾಮಿನಾಥನ್‌ರವರ ಬಗ್ಗೆ ನನಗೆ ಬಂದ ಕಾಗದವನ್ನು ತಮಗೆ ಇದರೊಡನೆ ಕಳುಹಿಸಿದ್ದೇನೆ. ಈ ಕಾಗದವನ್ನು ಕಂಡ ಮೇಲೆ ನನ್ನ ಮನಸ್ಸು ಹೇಗಿರುತ್ತದೆಂದು ನಿಮಗೆ ಬೇರೆ ಹೇಳಬೇಕಾಗಿಲ್ಲ. ಈ ಕಾಗದ ನನಗೆ ಬಂದಿರುವುದು ಅವರಿಗೆ ತಿಳಿಯದು. ನೀವಿಲ್ಲಿದ್ದಾಗಲೂ ಮದರಾಸಿಗೆ ಹೋದನಂತರವೂ ಅವರು ನನ್ನೊಡನೆ ಸಭ್ಯತೆಯಿಂದಲೇ ನಡೆದುಕೊಳ್ಳುತ್ತಿದ್ದಾರೆ. ನಿಮ್ಮ ಆಪ್ತಸ್ನೇಹಿತರೆಂಬುದರಿಂದ ನಾನು ಅವರೊಡನೆ ಸಲಿಗೆಯಿಂದಿರುತ್ತಿದ್ದೇನೆ. ಅವರು ನನ್ನನ್ನು ಮದುವೆಯಾಗ ಬಯಸುತ್ತಾರೆ. ಅವರ ಜೀವನವನ್ನು ಕುರಿತು ನಿಮಗೆ ಹೆಚ್ಚಾಗಿ ತಿಳಿದಿರುತ್ತದೆ. ದಯವಿಟ್ಟು ಅವರನ್ನು ಕುರಿತು ನಿಮ್ಮ ಸ್ಪಷ್ಟ ಅಭಿಪ್ರಾಯವನ್ನು ನಿರ್ವಂಚನೆಯಿಂದ ತಿಳಿಸಿ. ನೀವಲ್ಲದೆ ಹೋದರೆ ಈ ಸಹಾಯವನ್ನು ನನಗೆ ಇನ್ಯಾರು ಮಾಡಬೇಕು?

ತಮ್ಮ ಪ್ರೀತಿಯ ತಂಗಿ
**ಕಾಂತಾ.**

ಅವಳು ತನ್ನ ಕಾಗದದ ಜೊತೆ ಕಳುಹಿಸಿದ್ದ ಆ ಇನ್ನೊಂದು ಕಾಗದವನ್ನೂ ನೋಡಿದೆ:

ಪ್ರಿಯ ಸೋದರಿ ಕಾಂತಾ,

ನಿಮ್ಮನ್ನು ಸ್ವಾಮಿನಾಥನೆಂಬ ಯುವಕನೊಂದಿಗೆ ಕೆಲವು ಕಡೆಗಳಲ್ಲಿ ನೋಡಿದೆ. ಸ್ವಾಮಿನಾಥನ ಬಗ್ಗೆ ನೀವು ಸ್ವಲ್ಪ ಅರಿತುಕೊಂಡರೆ ಮುಂದೆ ನಿಮ್ಮ ಬಾಳಿಗೆ ಉಪಯೋಗವಾಗುವುದು. ಸ್ವಾಮಿನಾಥನನ್ನು ನಂಬಿ ನಡುಬೀದಿಯಲ್ಲಿ ನಿರ್ಗತಿಕರಾಗಿ ನಿಂತಿರುವ ಅಬಲೆಯರ ಪೈಕಿ ನಾನೊಬ್ಬಳು. ಹಾಗೇ ನನ್ನಂಥಾ ಹುಡುಗಿಯರು ಇನ್ನೂ ಕೆಲವರುಂಟೆಂಬುದನ್ನು ಆಮೇಲೆ ಅರಿತುಕೊಂಡೆ.

ನೀವು ಶ್ರೀಮಂತರ ಮಗಳು. ಆದ್ದರಿಂದ ಅವನು ನಿಮ್ಮನ್ನು ಮದುವೆಯಾಗಲು ಬಯಸಬಹುದು. ಆದರೆ ಮದುವೆಯ ನಂತರ ನಿಮ್ಮ ಕುಟುಂಬ ಸೌಖ್ಯವನ್ನು ನೆನೆದರೆ ನನಗೆ ನಡುಕವುಂಟಾಗುತ್ತದೆ.

ನಿನ್ನಂಥಾ ಒಂದು ಸೋದರಿಗೆ ಮಾಡುವ ಅಲ್ಪ ಸಹಾಯವೆಂದು ಭಾವಿಸಿ ಇದನ್ನು ಬರೆಯುತ್ತಿದ್ದೇನೆ. ಆಮೇಲೆ ನಿಮ್ಮಿಷ್ಟ.

ಇತಿ

ನಿಮ್ಮ ಪ್ರೀತಿ ಪಾತ್ರಳಾದ

**ಒಂದು ನಿರ್ಭಾಗ್ಯ ಸೋದರಿ.**

ಆ ಕಾಗದವನ್ನು ಚೆನ್ನಾಗಿ ಪರಿಕಿಸಿದೆ. ಆ ಕೈಬರಹವನ್ನು ಇದಕ್ಕೆ ಮುಂದೆ ನಾನು ಎಲ್ಲೋ ನೋಡಿದ ಹಾಗಿದೆ. ಹಸುರು ಮಸಿಯಿಂದ ಬರೆದಿದ್ದ ಅಕ್ಷರಗಳು. ನಾರಾಯಣಸ್ವಾಮಿಯವರ ಮನೆಯಲ್ಲಿದ್ದ ವಿಳಾಸ ಹಾಕದ ಕಾಗದ ಕಟ್ಟಿನ ಆರೆಂಜು ಬಣ್ಣದ ಹಾಳೆಯಲ್ಲಿ ಬರೆದು ಬಂದಿತ್ತು ಆ ಕಾಗದ. ನಾನು ಅರಿತುಕೊಂಡೆ. ನನಗೆ ನಗು ಬಂತು. ಸೇತುರಾಮನು ಈ ರೀತಿ ಅವನ ಸ್ನೇಹಿತನಿಗೇ ಸಹಾಯ ಮಾಡುತ್ತಾನೆಂದು ನಾನು ತಿಳಿದಿರಲಿಲ್ಲ!

ಎರಡನೆಯದಾಗಿ ಸ್ವಾಮಿನಾಥನ ಕಾಗದ:

ಪ್ರಿಯ ಸೋಮು,

ನಾನು ಕಾಂತಳನ್ನು ಪ್ರೀತಿಸುತ್ತಿರುವುದು ನಿನಗೆ ತಿಳಿಯದೆ ಇರಲಾರದು. ನಾನು ಅವಳನ್ನು ಎಷ್ಟು ಗಾಢವಾಗಿ ಪ್ರೇಮಿಸುತ್ತಿದ್ದೇನೆ ಗೊತ್ತೆ? ನನ್ನ ಬಗ್ಗೆ ನಿನ್ನಲ್ಲಿ ಒಳ್ಳೆಯ ಅಭಿಪ್ರಾಯವಿಲ್ಲವೆಂಬುದು ನನಗೆ ಗೊತ್ತು. ನಿನ್ನ ಅಭಿಪ್ರಾಯವೂ ಸ್ವಲ್ಪಮಟ್ಟಿಗೆ ಸರಿಯಾದುದೇ ಎಂದು ಒಪ್ಪಿಕೊಳ್ಳುತ್ತೇನೆ. ಆದರೆ ನೀನು ತಿಳಿಯುವ ಹಾಗೆ ಹೆಂಗಸರ ವಿಷಯದಲ್ಲಿ ನಾನು ಅಷ್ಟೊಂದು ಅಯೋಗ್ಯನಲ್ಲ. ಇದುವರೆಗೆ ನಾನು ಯಾರನ್ನೂ ಪ್ರೀತಿಸಿದ್ದೂ ಇಲ್ಲ; ಕೈಬಿಟ್ಟಿದ್ದೂ ಇಲ್ಲ.

'ಪ್ರೇಮವೆಂಬುದು ಬೇರೆ; ಶರೀರ ಸಂಬಂಧ ಬೇರೆ;' ಎಂಬ ಮತವನ್ನು ನೀನು ಅಂಗೀಕರಿಸುತ್ತೀಯೇನು?

ಕಳೆದು ಹೋದ ಎರಡು ವರ್ಷಗಳಲ್ಲಿ ನನ್ನ ಸುತ್ತಮುತ್ತಲಿನ ಪರಿಸ್ಥಿತಿ, ಸನ್ನಿವೇಶಗಳು ನನಗೆ ಸಾಧಕವಾಗಿರಲಿಲ್ಲ. ಹೊಟ್ಟೆಯುಪಾಡಿಗಾಗಿ ತಮ್ಮನ್ನೇ ಮಾರಿಕೊಳ್ಳಲನುವಾದ ಒಂದಿಬ್ಬರು ಬಡ ಹುಡುಗಿಯರಿಗೆ ಧನ ಸಹಾಯ ಮಾಡಿದೆ. ಬೇರೆ ರೀತಿಯಲ್ಲಿ ಅವರು ದುಡಿದು ಜೀವಿಸಿದರೆ ಲೇಸೆಂದು ಭಾವಿಸಿದೆ. ಆದರೆ ಅವರೂ ಸುಧಾರಿಸಲಿಲ್ಲ. ನಾನೂ ಅವರನ್ನು ಸುಧಾರಿಸಗೊಡಲಿಲ್ಲ.

ಕುಡಿತದ ಅಭ್ಯಾಸವುಳ್ಳವನು ಹೆಚ್ಚು ಕುಡಿತದಲ್ಲಿ ಆನಂದವನ್ನು ಕಾಣುವ ಹಾಗೆ ನನ್ನ ಜೀವನವು ಅಧಃಪತನದ ಕಡೆಗೆ ಸಾಗಿತ್ತು. ಅದನ್ನು ತಡೆದು

ಮತ್ತೆ ಮಾನವನಾಗಬೇಕೆಂದೇ ನಿನ್ನ ಕಡೆಗೆ ಬಂದೆ. ಬಂದನಂತರ ನನಗೆ ಜೀವನದಲ್ಲಿ ಹೆಚ್ಚು ವಿಶ್ವಾಸ ಉಂಟಾಗಿದೆ.

ಇಷ್ಟೆಲ್ಲ ಏಕೆ ಬರೆಯುತ್ತಿದ್ದೇನೆ ಗೊತ್ತೆ? ನೀನೇ ಈ ಸಮಯದಲ್ಲಿ ನನಗೆ ಸಹಾಯ ನೀಡಬಲ್ಲವನು. ನಿನ್ನೊಬ್ಬನಿಂದಲೇ ನನ್ನನ್ನು ಸರಿಯಾಗಿ ಅರ್ಥಮಾಡಿ ಕೊಳ್ಳಲು ಸಾಧ್ಯ. ಈ ಎರಡು ದಿನಗಳಿಂದ ಕಾಂತಳ ರೀತಿ ಇದ್ದಕ್ಕಿದ್ದ ಹಾಗೆ ಬದಲಾಯಿಸಿದೆ. ನನ್ನಲ್ಲಿ ಎಲ್ಲಿಲ್ಲದ ಸಂದೇಹಗೊಂಡಿದ್ದಾಳೆ. ಅವಳ ಪದಬಾಣಗಳನ್ನು ನನ್ನಿಂದ ಸಹಿಸಲು ಸಾಧ್ಯವಾಗು ತ್ತಿಲ್ಲ. ನನ್ನ ಬಗ್ಗೆ ತಪ್ಪು ತಿಳುವಳಿಕೆಯನ್ನು ಯಾರೋ ಅವಳಿಗೆ ತಿಳಿಸಿದ್ದಾರೆ. ತಪ್ಪು ತಿಳುವಳಿಕೆಯಲ್ಲದೆ ನಡೆದವುಗಳನ್ನು ಹಾಗೇ ಹೇಳಿದರೂ ಹೇಗೆ ಒಂದು ಹೆಣ್ಣು ನನ್ನನ್ನು ನಂಬುತ್ತಾಳೆ? ಅವಳನ್ನು ಯಾವ ರೀತಿ ಶಾಂತಗೊಳಿಸುವುದೆಂಬುದನ್ನರಿಯದೆ ಸಂಕಟ ಪಡುತ್ತಿದ್ದೇನೆ. ಅವಳ ಪ್ರೀತಿಯನ್ನು ನಾನು ಎಂದಿಗೂ ಕಳೆದುಕೊಳ್ಳಲಾರೆ ಅವಳು ನನ್ನ ಕೈ ಹಿಡಿದರೆ ಖಂಡಿತ ನನ್ನ ಜೀವನ ನೇರವಾದ ದಾರಿಯಲ್ಲಿ ಸುಗಮ ವಾಗಿ ಸಾಗುತ್ತದೆ. ನಾನು ಮಾಡಿದ ತಪ್ಪು ಕಾರ್ಯ ಗಳನ್ನು ಮತ್ತೆ ಕನಸಿನಲ್ಲೂ ಬಯಸುವುದಿಲ್ಲ. ಅವನ್ನು ನೆನೆದು ಈಗ ನಾನು ದುಃಖಗೊಳ್ಳುತ್ತಿದ್ದೇನೆ, ಸೋಮು!

ಸಾಧ್ಯವಾದರೆ ಒಂದು ಸಾರಿ ಇಲ್ಲಿಗೆ ಬಂದು ಹೋಗು; ಇಲ್ಲದಿದ್ದರೆ ಕಾಂತಳಿಗೆ ನನ್ನ ಬಗ್ಗೆ ದಯವಿಟ್ಟು ಬರೆದು ತಿಳಿಸು. ಮಾಡಿದ ತಪ್ಪುಗಳಿಗಾಗಿ ಅವಳ

ಬಳಿ ಕ್ಷಮೆ ಕೋರುತ್ತೇನೆ. ಇನ್ನು ಮುಂದೆ ಹಾಗೆಲ್ಲ ಇರುವುದಿಲ್ಲವೆಂದು ದೃಢ ಮನಸ್ಸಿನಿಂದ ಹೇಳುತ್ತೇನೆ.

ಎಂದು
ನಿನ್ನ ಪ್ರೀತಿಯ,
**ಸ್ವಾಮಿನಾಥ.**

ಇವರ ಈ ಇಕ್ಕಟ್ಟು ಬಹು ಸುಲಭವಾಗಿ ತೀರಿಹೋಗುವುದೆಂದೆನಿಸಿತು ನನಗೆ. ಸ್ವಾಮಿನಾಥನು ನನಗೆ ಬರೆದ ಕಾಗದವನ್ನು ಹಾಗೇ ಕಾಂತಳಿಗೆ ಕಳುಹಿಸಿಕೊಟ್ಟೆ. ಹಾಗೇ ಸೇತುರಾಮನ ಕಾಗದದ ಬಗ್ಗೆಯೂ ತಿಳಿಸಿದೆ.

ಪ್ರಿಯ ತಂಗಿ ಕಾಂತಾ,

ಇದರೊಂದಿಗೆ ಸ್ವಾಮಿನಾಥನು ನನಗೆ ಬರೆದ ಕಾಗದ ನಿನಗೆ ಬರುತ್ತದೆ. ಕಾಗದದಲ್ಲಿ ಅವನು ಬರೆದಿರುವುದೆಲ್ಲವನ್ನೂ ನಾನು ಹಾಗೇ ನಂಬುತ್ತೇನೆ. ಮದುವೆ ನಿನ್ನ ಸ್ವಂತ ವಿಷಯ. ಚೆನ್ನಾಗಿ ಯೋಚಿಸಿ ಒಂದು ನಿರ್ಣಯಕ್ಕೆ ಬಾ. ತಪ್ಪಿದವರು ತಿದ್ದಿಕೊಳ್ಳುವುದೂ, ತಪ್ಪನ್ನೇ ಮಾಡದವರು ತಪ್ಪುವುದೂ ಸಹಜವಲ್ಲವೆ?

ಸಹಿಯಿಲ್ಲದ ಆ 'ಸೋದರಿ'ಯ ಕಾಗದವು ನಿಜವಾದುದಲ್ಲ. ಇತರರ ಬಾಳಿನಲ್ಲಿ ತಲೆಯಿಟ್ಟು ಕಿಚ್ಚು ಹಚ್ಚುವುದೇ ಮನರಂಜನೆಯನ್ನಾಗಿ ಹೊಂದಿಯುಳ್ಳ ಕೆಲವರು ನಮ್ಮ ಸಮಾಜದಲ್ಲಿದ್ದಾರೆ. ಅಂಥಾ ಮನುಷ್ಯರ ಪೈಕಿ ಒಬ್ಬನು ಬರೆದುದೇ ಈ ಕಾಗದ! ಕೆಡುಕನ್ನು ಬಯಸಿ ಅದನ್ನು ಬರೆದಿದ್ದರೂ, ನೀನು ಸ್ವಾಮಿನಾಥನನ್ನು ಪೂರ್ಣವಾಗಿ ಅರ್ಥಮಾಡಿಕೊಳ್ಳಲು ಅದು ಸಹಕರಿಸಿದೆ. ಮದುವೆಗೆ ಮೊದಲೇ

ಒಬ್ಬರನ್ನೊಬ್ಬರು ಚೆನ್ನಾಗಿ ಅರ್ಥಮಾಡಿಕೊಳ್ಳಲು ಸಾಧ್ಯವಾದರೆ ಅದಕ್ಕಿಂತಲೂ ಮಿಗಿಲಾದ ಕಾರ್ಯವು ಬೇರೊಂದಿಲ್ಲ.

ಎಂದು
ನಿನ್ನ ಪ್ರೀತಿಯ,
**ಸೋಮು.**

ನಾರಾಯಣಸ್ವಾಮಿಯವರೂ ಒಂದು ದೊಡ್ಡ ಕಾಗದವನ್ನು ಬರೆದಿದ್ದರು. ತಾವು ಕೊಟ್ಟ ಪುಸ್ತಕಗಳ ಬಗ್ಗೆಯೂ, ನಾನು ಬರೆಯುವ ಸಾಮಾಜಿಕ ಕತೆಯಲ್ಲಿ ಬುದ್ಧ ಭಗವಾನರು ಎಷ್ಟರಮಟ್ಟಿಗೆ ಕಂಗೊಳಿಸುತ್ತಾರೆ ಎನ್ನುವುದನ್ನೂ, ನನ್ನ ಆರೋಗ್ಯ, ವಿಶ್ರಾಂತಿ, ಊಟ ಎಲ್ಲವನ್ನೂ ಕುರಿತೂ ವಿವರವಾಗಿ ಕೇಳಿದ್ದರು. ಅದೂ ಅಲ್ಲದೆ,

"ನೀವು ಇರುವ ಸ್ಟುಡಿಯೋವಿನಲ್ಲಿ ಈಗ ಒಳ್ಳೆಯ ಚಿತ್ರವೊಂದು ತಯಾರಾಗುತ್ತಿದೆಯೆಂದು ಕಾಣುತ್ತದೆ. ಚಿತ್ರ ತೆಗೆಯುವುದನ್ನು ಲಲಿತ ನೇರವಾಗಿ ನೋಡಬೇಕೆನ್ನುತ್ತಾಳೆ. ನಾನೂ ಕೂಡ 'ಷೂಟಿಂಗ್' ನೋಡಿದ್ದಿಲ್ಲ. ಆದ್ದರಿಂದ ಸ್ವಾರಸ್ಯವಾದ ಯಾವದಾದರೂ ಸಂದರ್ಭವನ್ನು ಇಷ್ಟರಲ್ಲೆ ಚಿತ್ರೀಕರಿಸುವುದಾಗಿದ್ದರೆ ತಿಳಿಸಿರಿ. ಗೊತ್ತುಪಡಿಸಿದ್ಧ ದಿನಕ್ಕೆ ನಾವಿಬ್ಬರೂ ಬರುತ್ತೇವೆ. ಎರಡು ದಿನ ಮದರಾಸಿನಲ್ಲಿದ್ದು ನಿಮ್ಮೊಡನೆ ಸಂತೋಷವಾಗಿ ಕಾಲ ಕಳೆಯಬಹುದಲ್ಲವೆ?"

—ಎಂದು ಬರೆದಿದ್ದರು.

ತಿಂಗಳ ಕೊನೆಯಲ್ಲಿ ಮುಖ್ಯವಾದ ಘಟ್ಟವೊಂದನ್ನು ಚಿತ್ರೀಕರಿಸಲಿರುವುದಾಗಿ ನನ್ನ ಮಿತ್ರರಾದ ಡೈರೆಕ್ಟರ್ ತಿಳಿಸಿದರು. ನಾರಾಯಣಸ್ವಾಮಿಯವರಿಗೆ ತಾರೀಖನ್ನು ತಿಳಿಸಿ ಬರೆದೆ. ಆ ತಾರೀಖು ಬರುವುದರೊಳಗೆ ನನ್ನ ಚಿತ್ರಕತೆಯ ನಿರ್ಮಾಣವೂ ಮುಗಿಯಿತು. ಗೊತ್ತುಪಡಿಸಿದ ದಿನ ಬೆಳಗ್ಗೆ ಹತ್ತು ಗಂಟೆಗೆ ಅವರೂ ಲಲಿತಳೂ ನಾನು ಇಳಿದಿದ್ದ ಹೋಟೆಲಿಗೆ ಕಾರಿನಲ್ಲಿ ಬಂದು ಸೇರಿದರು. ಅವರಿಗಾಗಿ ನಾನು ಸೌಕರ್ಯ

ವಾದ ಒಂದು ಕೋಣೆಯನ್ನು ಏರ್ಪಾಟು ಮಾಡಿದ್ದೆ. ಬಂದು ಸೇರಿದ ಐದು ನಿಮಿಷಗಳಿಗೆಲ್ಲಾ ಉಡುಪನ್ನು ಬದಲಾಯಿಸಿಕೊಂಡು ನನ್ನ ಕೊಠಡಿಗೇ ಬಂದು ಸೇರಿದರು ನಾರಾಯಣಸ್ವಾಮಿ. ಬರೆದಿಟ್ಟಿದ್ದ ಸಿನಿಮಾ ಕತೆಯನ್ನು ತಿರುವಿಹಾಕತೊಡಗಿದರು. ನನ್ನ ಎದೆ ಡವಡವನೆ ಹೊಡೆದು ಕೊಳ್ಳಲಾರಂಭಿಸಿತು. ಬುದ್ಧ ಭಗವಾನರ ವಾಕ್ಯಗಳನ್ನು ಆ ಕತೆಯಲ್ಲಿ ಸೇರಿಸಲು ನನಗೆ ಸಾಧ್ಯವಿಲ್ಲದೆ ಹೋಯಿತು.

ಅವರ ಪುಸ್ತಕಗಳಲ್ಲಿ ಎರಡನ್ನು ನೋಡಿದಾಗ, ಅವುಗಳಲ್ಲಿ ನನ್ನ ಕತೆಗೆ ತಕ್ಕ ವಾಕ್ಯಗಳು ಯಾವುದೂ ಸಿಗಲಿಲ್ಲವಾದ್ದರಿಂದ ನಾನು ಸುಮ್ಮನಿದ್ದು ಬಿಟ್ಟೆ. ಈಗ ಅವರಿಗೆ ನಾನು ಏನೆಂದು ಉತ್ತರಿಸುವುದೆಂಬ ಯೋಚನೆ ನನ್ನನ್ನು ಕಾಡುತ್ತಿತ್ತು.

"ಆಹಾ! ಅದ್ಭುತ! ತುಂಬ ಅದ್ಭುತವಾಗಿದೆ! ಏನು ಸೋಮು, ಹೀಗೆ ದೃಶ್ಯಕ್ಕೆ ದೃಶ್ಯ ಮುತ್ತಿನ ಸರದಂತೆ ನುಡಿಕಟ್ಟುಗಳನ್ನು ಹೆಣೆದಿದ್ದೀರಲ್ಲ ಬುದ್ಧ ಭಗವಾನರ ಅಮೃತವಾಣಿ ಕತೆಯ ತುಂಬ ಮೊಳಗುತ್ತಿದೆ!"

"ಬಂದು...."

"ಎಲ್ಲ ಪುಸ್ತಕಗಳನ್ನು ನನಗಾಗಿಯೇ ಶ್ರಮಪಟ್ಟು ಓದಿದ್ದೀರಿ!"

"ನಾನು ಬಂದು...."

"ಅದೇ ಗೊತ್ತಾಗುತ್ತಿದೆಯಲ್ಲ! ಪ್ರೀತಿಯ ಸಾರವೆಲ್ಲವೂ ಕತೆಯಲ್ಲಿ ಕರಗಿಬಿಟ್ಟಿದೆ"

—ಎಂದರು ನಾರಾಯಣಸ್ವಾಮಿ.

ನನಗೇನೂ ತಿಳಿಯಲಿಲ್ಲ.

"ಪ್ರೀತಿ, ಸತ್ಯ, ಅಹಿಂಸೆ ಸಮತೆ,....ಅಪ್ಪಪ್ಪಾ! ಸತ್ವಪೂರ್ಣ ನುಡಿಗಳನ್ನೆಲ್ಲವನ್ನೂ ಹಾಗೇ ಅರಿಸಿಬಿಟ್ಟಿದ್ದೀರಲ್ಲ ಸೋಮು! ನವರತ್ನಗಳ ಹಾಗೆ ನುಡಿಗಳು ಜ್ವಲಿಸುತ್ತಿವೆ"

—ಎಂದು ತುಂಬು ಹೃದಯದಿಂದ ಹೇಳಿದರು ನಾರಾಯಣಸ್ವಾಮಿ.

ಹೋಗುತ್ತಿದ್ದ ಜೀವ ಮರಳಿ ಬಂತು ನನಗೆ. ಪ್ರೀತಿ, ಸತ್ಯ ಮುಂತಾದ ಪದಗಳಿಲ್ಲದೆ ಹೇಗೆ ತಾನೆ ಕೊಲೆ ದರೋಡೆಗಳು ತುಂಬಿದ ಈ ಕಾಲದ ಸಾಮಾಜಿಕ ಚಿತ್ರಗಳನ್ನು ಬರೆಯುವುದು? ಆಪತ್ಕಾಲದಲ್ಲಿ ಕೈಹಿಡಿದು ಕಾಪಾಡಿದ ಆ ಬುದ್ಧದೇವನಿಗೆ ಮನಸ್ಸಿನಲ್ಲೇ ವಂದಿಸಿದೆ.

ಅಂದಿನ ರಾತ್ರಿ ಸಿನಿಮಾ ಸ್ಟುಡಿಯೋದಲ್ಲಿ 'ಗಂಡ' ಎಂಬ ಸಾಮಾಜಿಕ ಚಿತ್ರದ 'ಸೆಟ್' ಸಿದ್ಧವಾಗುತ್ತಿತ್ತು. ಕಥಾನಾಯಕಿಯಾಗಿ ನಟಿಸುವ ಪ್ರಬಲ ಕೇರಳ ನಟಿ ಕುಟ್ಟಿಯಮ್ಮಳು ಕೊನೆಯ ನಿಮಿಷದಲ್ಲಿ ಅವಸರವಾಗಿ ಬಂದು ಮೇಕಪ್ ರೂಮಿನೊಳಕ್ಕೆ ನುಗ್ಗಿದಳು. ಬೇರೆ ಒಂದು ಚಿತ್ರದ ಷೂಟಿಂಗಿನಿಂದ ಈಗತಾನೇ ಬರುವುದರಿಂದ ಸ್ವಲ್ಪ ತಡವಾಯಿತೆಂದು ಆಕೆಯ ಕಾರ್ಯದರ್ಶಿ ಹೇಳಿದನು. ಡೈರೆಕ್ಟರಿಗೆ ಕೋಪ ಉಕ್ಕಿ ಬಂತು. ಆದರೂ ಅವರು ಅದನ್ನು ನುಂಗಿಕೊಂಡು, ಅವಳು ಮೇಕಪ್ ಮಾಡಿಕೊಂಡು ಹೊರಗೆ ಬಂದಾಗ, ಇವರೂ ಮುಖದಲ್ಲಿ ನಗುವನ್ನು ಬಲವಂತದಿಂದ ಬರಮಾಡಿಕೊಳ್ಳಬೇಕಾಯಿತು. ಇಲ್ಲದಿದ್ದರೆ ಅವಳ 'ಮೂಡ್' (Mood) ಕೆಟ್ಟುಹೋಗುತ್ತಂತೆ. ಅದು ಪ್ರೇಮಘಟ್ಟವಾಗಿತ್ತು.

ಕಡೆಯ ನಿಮಿಷದ ರಿಹರ್ಸಲ್ ಆರಂಭವಾಯಿತು. ಕಥಾನಾಯಕ ಸೋಫಾದಲ್ಲಿ ಒರಗಿದ ಹಾಗೇ ಸಿಗರೇಟನ್ನು ಹಚ್ಚಿಸುತ್ತಿದ್ದನು. ಕಥಾನಾಯಕಿ ಕುಟ್ಟಿಯಮ್ಮ ಅವನ ಕಡೆಗೆ ನಡೆದು ಸಮೀಪಕ್ಕೆ ಹೋದಳು. ಮುಖವನ್ನು ವಕ್ರವಾಗಿಟ್ಟುಕೊಂಡು

"ಅನ್ನಾ! ನಣ್ಣಿಂದ ಸಹಿಸುವುದಕ್ಕೆ ಸಾಧ್ಯವಿಳ್ಳ ಅನ್ನಾ!"
—ಎಂದಳು.

ನನ್ನ ಪಕ್ಕದಲ್ಲಿ ಕುಳಿತಿದ್ದ ನಾರಾಯಣಸ್ವಾಮಿಗೆ ನಗು ತಡೆಯಲಾಗಲಿಲ್ಲ. ಮೆಲುಧನಿಯಲ್ಲಿ ನನಗೂ ಲಲಿತಳಿಗೂ ಕೇಳಿಸುವ ಹಾಗೆ,

"ನನ್ನಿಂದ ಈ ಭಾಷಾ ಕೊಲೆಯನ್ನು ಸಹಿಸಲು ಸಾಧ್ಯವಿಲ್ಲ!"
—ಎಂದರು.

“ಈಗ ಚಿತ್ರವನ್ನು ಮಾತ್ರ ಹಿಡಿಯುತ್ತಾರೆ. ಬೇರೊಬ್ಬ ಹುಡುಗಿಯನ್ನು ಈ ರೀತಿ ಮಾತನಾಡಿಸಿ ಅವನ್ನು ಬೇರೆಯಾಗೇ ರಿಕಾರ್ಡ್ ಮಾಡುತ್ತಾರೆ”

—ಎಂದೆ.

ಅಷ್ಟರಲ್ಲೆ ಅಲ್ಲಿ ಸೆಟ್ಟಿನ ಮೇಲೆ ಒಂದೇ ಭ್ರಮೆಯಾಗಿತ್ತು. ಕಥಾನಾಯಕಿ ಸಿಗರೇಟನ್ನು ಕೈಗೆ ತೆಗೆದುಕೊಂಡು, ಕುಟ್ಟಿಯಮ್ಮಳನ್ನು ಹುಚ್ಚಿಯನ್ನು ನೋಡುವ ಹಾಗೆ ನೋಡಿದನು. ಡೈರೆಕ್ಟರ ಮುಖವು ಗರಬಡಿದ ಹಾಗಿತ್ತು.

“ಅಮ್ಮಾ! ಇಂಥಾ ಸಂಭಾಷಣವೇ ಈ ಚಿತ್ರದಲ್ಲಿಲ್ಲವಲ್ಲ! ಇದು ‘ಗಂಡ’ನ ಚಿತ್ರ; ನಿಮ್ಮೆದುರಿನಲ್ಲಿರುವುದು ನಿಮ್ಮ ಗಂಡ; ಅಣ್ಣನಲ್ಲ!”

—ಎಂದರು ಡೈರೆಕ್ಟರ್.

“ಅರೆರೆ! ಮರೆತುಹೋದೆ ಸಾರ್!....ಹುಂ, ಸರಿ!”

—ಎಂದು ಕಥಾನಾಯಕನ ಕಡೆಗೆ ತಿರುಗಿದಳು. ಕಾಳಿಯಂತೆ ಮುಖವನ್ನು ಮಾಡಿಕೊಂಡಳು. ಕೈಯನ್ನು ಅವನ ಕಡೆಗೆ ಜೋರಾಗಿ ಬೀಸಿ, [illegible]

“ವಿನ್ನೇ! [illegible]ಷನ್ ಅಕ್ಕಿ ತರದಿದ್ದರೆ, ಇವತ್ತು ಇಬ್ಬರೂ ಹೋಟಲಿಗೆ ಹೋಗಬೇಕಾದ್ದೇ!”

—ಎಂದು ಕಿರಚಿಕೊಂಡಳು.

“ಭೇಷ್, ಷೂಟ್!”

—ಎಂದರು ಡೈರೆಕ್ಟರ್.

ಚಿತ್ರದ ಈ ಪ್ರೇಮ ದೃಶ್ಯವು ಮುಂದೆ ಸಾಗಿತು.

ನಮಗೆ ಪಕ್ಕದಲ್ಲಿ ಕುಳಿತಿದ್ದ ಕುಟ್ಟಿಯಮ್ಮಳ ಕಾರ್ಯದರ್ಶಿ,

“ಈಗತಾನೇ ಅಮ್ಮಾವ್ರು ‘ತಂಗಿ’ ಚಿತ್ರದ ಷೂಟಿಂಗಿನಿಂದ ಬರ್ತಿದ್ದಾರೆ; ಆ ಸಂಭಾಷಣೆಗಳನ್ನು ಮರೆತು ಹೇಳಿಬಿಟ್ಟಿದ್ದಾರೆ ಅಷ್ಟೆ!”

—ಎಂದ.

ಚಿತ್ರೀಕರಣ ಮುಗಿದ್ದ ಬಳಿಕ ಬೆವರಿಳಿಯುತ್ತಿದ್ದ ಮುಖವನ್ನೊರೆಸಿ ಕೊಳ್ಳುತ್ತಾ ನಮ್ಮ ಹತ್ತಿರಕ್ಕೆ ಬಂದರು ಡೈರೆಕ್ಟರ್.

"ಹೀಗೇ ಕಷ್ಟಪಡಬೇಕಾಗಿದೆ. ಹಾಡಲು ಬರದೆ ಇರುವವರಿಂದ ಹಾಡಿಸಿ, ಕುಣಿಯಲಾರದವರಿಂದ ಕುಣಿಸಿ, ಮಾತು ತಿಳಿಯದವರಿಂದ ಮಾತನಾಡಿಸಿ ಚಿತ್ರವನ್ನು ತೆಗೆಯಬೇಕು. ನಟಿಸಲು ಬರುವವರು ನಕ್ಷತ್ರ ಗಳಾಗಿ ಮಾರ್ಪಡುವತನಕ ನಮ್ಮ ಮಾತನ್ನು ಕೇಳುತ್ತಾರೆ. ಆಮೇಲೆ ತಟ್ಟೆಂದು ಆಕಾಶಕ್ಕೆ ಜಿಗಿದು ಮಿನುಗಲಾರಂಭಿಸಿಬಿಡುತ್ತಾರೆ!"

—ಎಂದರು.

"ನಕ್ಷತ್ರಲೋಕವನ್ನು ತಲುಪುವುದರೊಳಗೆ ನೀವು ಅವರನ್ನು ಮೋಕ್ಷ ಲೋಕಕ್ಕೆ ಕಳುಹಿಸದಿದ್ದರೆ ಸಾಲದೆ?"

—ಎಂದ ಕೋಪಗೊಂಡ ಕಥಾನಾಯಕಿಯ ಕಾರ್ಯದರ್ಶಿ.

ಮರುದಿವಸ ಸಾಯಂಕಾಲ ಬೀಚಿಗೆ ಹೊರಡುವುದಕ್ಕೆ ಲಲಿತಳು ಅಲಂಕರಿಸಿಕೊಂಡು ಕೊಠಡಿಯ ಬಾಗಿಲ ಬಳಿ ತಯಾರಾಗಿ ನಿಂತಳು. ನಾರಾಯಣಸ್ವಾಮಿ ಸ್ನಾನಗೃಹದಲ್ಲಿ ಮುಖ ತೊಳೆಯುತ್ತಿದ್ದರು. ವೆರಾಂಡಾ ದಲ್ಲಿ ನಿಂತಿದ್ದ ನನ್ನ ಹೋಟೆಲಿನ ಸ್ನೇಹಿತರೊಬ್ಬರು ಲಲಿತ ಬಾಗಿಲ ಬಳಿ ನಿಂತಿರುವುದನ್ನು ಗಮನಿಸದೆ,

"ನಿಮ್ಮ ಮನೆಯಾಕೆ ಬಂದಿರುವಂತಿದೆ!"

—ಎಂದು ಸಾಧಾರಣವಾಗಿ ವಿಚಾರಿಸಿದರು.

ನನಗೆ ಚುರ್ರೆಂದು ಚುಚ್ಚಿತು ಅವರ ಆ ಮಾತುಗಳು.

"ಅಲ್ಲ, ಮನೆಯಾಕೆಯಲ್ಲ...."

—ಎಂದು ತಡವರಿಸಿದೆ.

"ಕ್ಷಮಿಸಬೇಕು"

—ಎಂದು ಹೇಳಿ ವೇಗವಾಗಿ ಹೊರಟು ಹೋದರು ಅವರು.

ಲಲಿತಳು ಆಗ ನನ್ನನ್ನು ನೋಡುತ್ತಿದ್ದಳು. ನಾನು ಅವಳನ್ನು ತಿರುಗಿ ನೋಡಿದ ಮೇಲೂ ಅವಳು ತನ್ನ ತಲೆಯನ್ನು ತಗ್ಗಿಸಲಿಲ್ಲ. ಆದ್ದರಿಂದ ನನ್ನ ತಲೆಯೇ ಬಾಗಿತು.

ನಾರಾಯಣಸ್ವಾಮಿ ಬಂದನಂತರ ಅವರ ಬಳಿ,

"ನನಗೆ ಸ್ವಲ್ಪ ತಲೆನೋಯುತ್ತಿದೆ. ದಯವಿಟ್ಟು ನೀವಿಬ್ಬರೂ ಬೀಚಿಗೆ ಹೋಗಿ ಬನ್ನಿ. ನಾನಿಲ್ಲೇ ಇದ್ದು ವಿಶ್ರಾಂತಿ ಪಡೆಯುತ್ತೇನೆ"

—ಎಂದು ಹೇಳಿದೆ.

"ಸಮುದ್ರ ಗಾಳಿ ಬಿದ್ದರೆ ತಲೆನೋವು ಹಾರಿಹೋಗುತ್ತೆ ! ವಿಶ್ರಾಂತಿಗಾಗಿ ತಾನೇ ಅಲ್ಲಿಗೆ ಹೋಗುವುದು ?"

"ಕ್ಷಮಿಸಿ, ಮಲಗಿ ನಿದ್ದೆ ಮಾಡಬೇಕೆನಿಸಿದೆ."

"ಹಾಗಾದರೆ ನಾವೂ ಹೋಗುವುದಿಲ್ಲ ! ಎಲ್ಲರೂ ನಿದ್ದೆಮಾಡೋಣ!"

—ಎಂದರು ನಾರಾಯಣಸ್ವಾಮಿ.

ಅವರ ಪ್ರೀತಿಯನ್ನು ಮೀರಲಾಗದೆ ನಾನೂ ಹೊರಟೆ. ಕಾರು ತಿರುವಳ್ಳಿಕ್ಕೇಣಿಯ ಕಡೆಗೆ ನಿಧಾನವಾಗಿ ಹೋಗುತ್ತಿತ್ತು. ಎದುರಿನಲ್ಲಿ ಬರುತ್ತಿದ್ದ ಟ್ರಾಮಿನಿಂದ ಯಾರೋ ಕೂಗಿದರು. ಬಾಗಿ ನೋಡಿದೆ. ಟ್ರಾಂ ಗಾಡಿಯ ಬಾಗಿಲ ಬಳಿ ಹಿಡಿಯನ್ನು ಒಂದು ಕೈಯಲ್ಲಿ ಹಿಡಿದುಕೊಂಡು ತೂಗಾಡುತ್ತಾ ಇನ್ನೊಂದು ಕೈಯನ್ನು ಗಾಳಿಯಲ್ಲಿ ಬೀಸಿದನು ಸೇತುರಾಮು.

ಸಮುದ್ರ ತೀರದಲ್ಲಿ ಸಂಜೆಯ ಹೊತ್ತು ಮೋಹಕವಾಗಿತ್ತು. ಜನಸಂದಣಿ ಹೆಚ್ಚಾಗಿಲ್ಲದ ಕಡೆಗೆ ನಾವು ನಡೆದೆವು. ದಕ್ಷಿಣ ದಿಕ್ಕಿನಲ್ಲಿ ಬೆಸ್ತರು ವಾಸಿಸುವ ಸ್ಥಳದ ಬಳಿ ಬಂದುಬಿಟ್ಟೆವು. ದೊಡ್ಡ ದೋಣಿಯೊಂದು ದಂಡೆಯಲ್ಲಿ ಹುದುಗಿ ನಿಂತಿತ್ತು. ಅದರ ಮರೆಯಲ್ಲಿ ಎಲ್ಲರೂ ಕುಳಿತೆವು.

"ತಿಳಿದ ಮನುಷ್ಯರನ್ನು ಕಂಡು ನುಸುಳಿಕೊಂಡು ಹೋಗುವ ಗುಣ

ನನಗೆ ಮಾತ್ರವಿದೆಯೆಂದು ತಿಳಿದಿದ್ದೆ. ನನಗಿಂತಲೂ ನೀವು ಇನ್ನೊಂದು ಮೆಟ್ಟಲು ಹೆಚ್ಚಾಗೇ ಹೋಗಿಬಿಟ್ಟಿರಲ್ಲ!"

—ಎಂದರು ನಾರಾಯಣಸ್ವಾಮಿ. ಆಮೇಲೆ ಜಮಖಾನವನ್ನು ನೆಲದಲ್ಲಿ ಹಾಸಿದರು. ನೆಮ್ಮದಿಯಾಗಿ ಮಲಗಿದರು.

"ಇಷ್ಟು ದೊಡ್ಡ ಗುಂಪಿನಲ್ಲೂ ಅದು ಹೇಗೋ ಕೆಲವರು ನೋಡಿ ಬಿಡುತ್ತಾರೆ; ಹುಡುಕಿ ಬಂದ ಶಾಂತಿ ಸಿಗುವುದಿಲ್ಲ, ಅಲ್ಲವೆ?"

—ಎಂದಳು ಲಲಿತ.

ಕೆಳಗೆ ಮಲಗಿದ ಕೆಲವು ನಿಮಿಷಗಳಿಗೆಲ್ಲಾ ಗೆಳೆಯ ನಾರಾಯಣ ಸ್ವಾಮಿಯವರು ಚೆನ್ನಾಗಿ ನಿದ್ದೆ ಹೋಗಿಬಿಟ್ಟರು. ನಿನ್ನೆಯ ರಾತ್ರಿ ಬಹಳ ಹೊತ್ತಿನ ತನಕ ಎಚ್ಚತ್ತಿದ್ದ ಬಳಲಿಕೆ ಅವರಿಗೆ. ಇಂದು ಬೆಳಗ್ಗೆಯೂ ಬೇಗನೆ ಇಬ್ಬರೂ ಎದ್ದುಬಿಟ್ಟರು. ಅವರೊಡನೆ ಅಂಗಡಿ ಬೀದಿಗೆ ಹೋಗಿ ಕಾರು ತುಂಬ ಸಾಮಾನು ಕೊಂಡು ತಂದಳು ಲಲಿತ.

"ಸೇತು ಮಾವನನ್ನ ದಾರಿಯಲ್ಲಿ ನೋಡಿದಿರಾ?"

—ಎಂದು ಕೇಳಿದಳು ಲಲಿತ.

"ನೋಡಿದೆ."

"ಏನು ಕೆಲಸವಾಗಿ ಇಲ್ಲಿಗೆ ಬಂದಿದ್ದಾರೆ?"

"ಗೊತ್ತಿಲ್ಲ."

'ತಾವರೆ'ಯ ಆ ತಿಂಗಳ ಸಂಚಿಕೆಯನ್ನು ಒಂದು ಹುಡುಗ ಮಾರುತ್ತ ಹೋದ. ಅಂದು ಭಾನುವಾರವಾದ್ದರಿಂದ ನನಗೆ ಅಂಚೆಯಲ್ಲಿ ಪತ್ರಿಕೆ ಬರಲಿಲ್ಲ. ಮಾರಾಟಕ್ಕೆ ಮಾತ್ರ ರೈಲಿನಲ್ಲಿ ಬಂದಿದೆ. ಹುಡುಗನನ್ನು ಕರೆದು ಒಂದು ಪತ್ರಿಕೆಯನ್ನು ಕೊಂಡು, ತೆಗೆದು ನೋಡಿದಳು ಲಲಿತ.

"ಈ ಸಂಚಿಕೆಯಲ್ಲೂ ಬರೆದಿದ್ದೀರೇ!"

ಕತೆಯನ್ನು ಓದಿಕೊಂಡು ಹೋದಳು ಲಲಿತ. ಅಲ್ಲಲ್ಲಿ ಸ್ವಲ್ಪ ನಿಲ್ಲಿಸಿ, ಯೋಚಿಸಿದಳು. ನಾನು ಸಮುದ್ರದ ಅಲೆಗಳನ್ನೂ, ಅದರ ಮೇಲೆ ತೇಲುತ್ತಿದ್ದ ಸಣ್ಣ ಹಡಗುಗಳ ವಿನೋದವನ್ನೂ ನೋಡುತ್ತಿದ್ದೆ. ಮದರಾಸಿಗೆ ಬಂದು ತಿಂಗಳಾದರೂ ಇಂದೇ ನಾನು ಸಮುದ್ರ ತೀರಕ್ಕೆ ಬರುವುದಕ್ಕೆ ಸಾಧ್ಯವಾದದ್ದು. ಸಂಜೆಯ ಹೊತ್ತು ಸ್ಟುಡಿಯೋದಲ್ಲಿ ಪದ್ಧತಿಯಂತೆ ಯಾರಾದರೂ ಮಾತಿಗೆ ಬಂದು ಕುಳಿತು ಬಿಡುತ್ತಿದ್ದರು. ಇಲ್ಲದಿದ್ದರೆ ಡೈರೆಕ್ಟರೊಂದಿಗೆ ಸಿನಿಮಾ ನೋಡಲು ಹೊರಟುಬಿಡುತ್ತಿದ್ದೆ. ಇಂದಿನ ಈ ಅನುಭವ ನನಗೆ ಬಂಧನದಿಂದ ಹೊರಬಂದ ಖೈದಿಯ ಅನುಭವದ ಹಾಗೆ ಕಂಡಿತು. ಇದೇ ಸಮುದ್ರ ತೀರದಲ್ಲಿ ನಾನು ವಿದ್ಯಾರ್ಥಿಯಾಗಿದ್ದಾಗ ಎಷ್ಟೆಷ್ಟು ಮನಸ್ಸಿನಲ್ಲಿ ಕೋಟೆಗಳನ್ನು ಕಟ್ಟಿದ್ದೆ ಗೊತ್ತೆ ?

"ಆ ಗೆಳತಿ ನಿಮ್ಮ ಹತ್ತಿರ ಅವಳ ಮದುವೆಯ ಸಮಯದಲ್ಲಿ ಏನು ಹೇಳಿದಳು ?"

—ಎಂದಳು ಲಲಿತ.

"ಯಾವ ಗೆಳತಿ ? ಕತೆಯಲ್ಲಿ ಬರುವ ಗೆಳತಿಯೇ ?"

"ಕತೆಯಲ್ಲೇ ! ನೀವು ಬರೆಯುವ ಕತೆಯನ್ನು ಕುರಿತು ನನಗೂ ಸ್ವಲ್ಪ ಗೊತ್ತು...."

"ಒಬ್ಬನು ಬರೆಯುವ ಕತೆಯೆಲ್ಲವೂ ಅವನ ಜೀವನದಲ್ಲಿ ನಡೆದ ಕತೆ ಯಾಗಿರಲು ಸಾಧ್ಯವಿಲ್ಲ. ಓದುಗರು ಕೆಲವರು ಈ ರೀತಿ ತಪ್ಪಾಗಿ ಕಲ್ಪಿಸಿ ಕೊಳ್ಳುತ್ತಾರೆ. ಬರಹಗಾರನಿಗಿಂತಲೂ ಈ ವಿಷಯದಲ್ಲಿ ಓದುಗರಿಗೇ ಹೆಚ್ಚು ಕಲ್ಪನೆಯುಂಟಾಗುತ್ತದೆ !"

"ನಾನು ಬರೆಯಲಾರೆ. ಆದರೆ ಬರೆಯುವ ನಿಮ್ಮ ಹೃದಯ ನನಗೆ ಗೊತ್ತು"

ನನ್ನ ಹೃದಯವೇ !

ನನ್ನ ಹೃದಯ ನಡುಗಿತು.

ಸಮುದ್ರದ ದೊಡ್ಡ ಅಲೆಯೊಂದು ಅದರ ಮೇಲೆ ಅಪ್ಪಳಿಸಿದ ಹಾಗಾಯಿತು ನನಗೆ.

"ಕತೆಯಲ್ಲಿ ಬರುವ ಆ ಹುಡುಗಿ ಏನು ಹೇಳಿದಳು ?"

'ಯಾವಾಗಲೂ ಮಕ್ಕಳಾಗೇ ಇದ್ದು ಬಿಟ್ಟರೆ ಏನು ?'
—ಎಂದಳೇ, ಅಥವಾ

'ಏಕೆ ನೀವು ಮಾತ್ರ ಹಸುಗೂಸಾಗೇ ಇದ್ದೀರಿ ?' ಎಂದಳೇ ?"
—ಎಂದು ಕೇಳಿದಳು.

ನಾನು ಉತ್ತರಿಸಲಿಲ್ಲ.

"ಒಂದು ವೇಳೆ ಹಾಗಿದ್ದಿದ್ದರೆ ನೀವಿಬ್ಬರೂ ಈಗ ಗಂಡಹೆಂಡಿರಾಗಿರ ಬಹುದಾಗಿತ್ತು."

"ಇಲ್ಲ. ನಾನು ಒಂದು ದಿನವಾದರೂ ಅವಳನ್ನು ಮದುವೆಯಾಗಲು ಬಯಸಲಿಲ್ಲ."

"ನಿಮ್ಮನ್ನು ಒಂದು ಕೇಳಲೇ ?"

"ಏನು"

"ಇಬ್ಬರು ಗೆಳೆಯರ ಹಾಗೋ ಇಬ್ಬರು ಗೆಳತಿಯರ ಹಾಗೋ ಒಬ್ಬ ತರುಣನೂ ಒಬ್ಬ ತರುಣಿಯು ಸ್ನೇಹದಿಂದ ಇರಲು ಸಾಧ್ಯವೆ ?"

"ಸಾಧ್ಯ"

"ನಿಜವೇ ?"

"ಸಾಧ್ಯವೆಂದೇ ಭಾವಿಸುತ್ತೇನೆ"

ಅವಳು ನಿಟ್ಟುಸಿರುಬಿಟ್ಟಳು.

"ನಾನೂ ಅದನ್ನೇ ಬಯಸುತ್ತೇನೆ. ಆದರೆ...."

ನನಗೆ ಅವಳ ಮುಖವನ್ನು ನೋಡುವ ಧೈರ್ಯ ಈಗ ಇಲ್ಲದೆ ಹೋಯಿತು. ಅವಳ ಮುಂದಿನ ಮಾತು ಯಾವ ರೀತಿಯದ್ದಾಗಿರುತ್ತೋ

ಎಂಬ ಅಂಜಿಕೆ ನನ್ನನ್ನು ಕಾಡಿತು. ಅವಳ ಮಾತು ಅರ್ಧದಲ್ಲೇ ನಿಂತು ಹೋಯಿತು.

ಭಾವನೆಗೂ ಬಯಕೆಗೂ ಎಷ್ಟೋ ಅಂತರವಿದೆ. 'ಬಯಸುತ್ತೇನೆ' ಎಂದು ಮಾತ್ರ ಅವಳು ಹೇಳಿದ್ದರೆ ಎಷ್ಟು ಚೆನ್ನಾಗಿರುತ್ತಿತ್ತು?

'ಆದರೆ....? ಏಕೆ ಈ ಆದರೆ'

ಅದಕ್ಕೆ ಮೇಲೆ ಇಬ್ಬರೂ ಏನೂ ಮಾತನಾಡಲಿಲ್ಲ. ಸಮುದ್ರ ತೀರವನ್ನು ಕತ್ತಲಾವರಿಸುತ್ತಿತ್ತು. ಆ ಕತ್ತಲು ನನ್ನನ್ನರಿಯದೆ ನನ್ನೊಳಗೂ ಹರಡುತ್ತಿದ್ದ ಹಾಗೆ ಭಾವಿಸಿದೆ. ಅಹುದು, ಅದನ್ನು ಕತ್ತಲೆಂದೇ ಹೇಳಬೇಕು. ಆದರೆ ನನ್ನ ಹೃದಯ ಅದನ್ನು ಕತ್ತಲೆಯೆಂಬ ರೀತಿಯಲ್ಲೇ ಅಂಗೀಕರಿಸಿತೇ? ಸಮುದ್ರದಾಳದಲ್ಲಿ ಬಿದ್ದ ತಕ್ಷಣ ಜೀವಕ್ಕಾಗಿ ತಪಿಸುವ ಭಯಂಕರ ಹೋರಾಟವಿದೆಯಲ್ಲ, ಆ ಬಗೆಯಲ್ಲಿ ಒದ್ದಾಡಿತು ನನ್ನ ಹೃದಯ. ಲಲಿತಳ ಅಗಲವಾದ ಕಣ್ಣುಗಳಲ್ಲಿ ಪ್ರತಿಬಿಂಬಿಸಿದ ಶೋಕದ ಆ ಕಗ್ಗತ್ತಲಿನ ಕಡಲಿನಾಳದಲ್ಲೇ ಅದು ಮುಳುಗಿ ನರಳಿರಬೇಕು.

"ಹೋಗೋಣವೆ?"

—ಎಂದಳು.

"ಸರಿ"

ನಾರಾಯಣಸ್ವಾಮಿಯೂ ಎದ್ದರು. ಮೂವರೂ ಕಾರಿನ ಕಡೆಗೆ ಕಾಲುಹಾಕಿದೆವು.

## ೧೦

ತಿರುಚ್ಚಿಗೆ ಮರಳಿ ಬಂದು ಹದಿನೈದು ದಿನಕ್ಕೆ ಮೇಲಾಯಿತು. ಬಂದ ನಂತರ ಒಂದು ಸಾರಿಯಾದರೂ ಮಿತ್ರರ ಮನೆಗೆ ಹೋಗಲಿಲ್ಲ. ಐದಾರು ಬಾರಿ ಹೋಗೋಣವೆಂದು ಹೊರಟೆ. ಆದರೆ ಏಕೋ ಮನಸ್ಸು ಒಪ್ಪಲಿಲ್ಲ. ಒಂದು ಸಲವಾದರೋ ಅವರ ಬಂಗಲೆಯ ಬಾಗಿಲವರೆಗೆ ಹೋಗಿಬಿಟ್ಟು, ಒಳಗೆ ಹೋಗಲು ಮನಸ್ಸಿಲ್ಲದೆ ಬೇರೆ ಎಲ್ಲಿಗೋ ತಿರುಗಿ ನಡೆದೆ.

ಮನಸ್ಸು ನೆನೆದಾಗ ಕಾಲುಗಳು ಹಿಡಿದವು; ಕಾಲುಗಳು ನಡೆದಾಗ ಮನಸ್ಸು ನಿರಾಕರಿಸಿತು; ಆದರೆ ಅಲ್ಲಿಗೆ ಹೋಗದ ಒಂದೊಂದು ದಿನವೂ ನನ್ನ ಹೃದಯ ಅಶಾಂತಿಯ ನೆಲೆಯಾಯಿತು.

"ಹೋಗದೇನೇ ಇದ್ದರೆ ಏನು"

—ಎಂಬ ನನ್ನ ಭಾವನೆ ಎಷ್ಟು ಬಲಹೀನವಾದುದು ಎಂಬುದನ್ನು ನಾನು ಕ್ಷಣಕ್ಷಣಕ್ಕೂ ಅನುಭವಿಸುತ್ತಿದ್ದೆ. ಆ ಅನುಭವದಲ್ಲಿ ಮೊದಲೇ ನಾನು ಅಲ್ಲಿ ಹೋಗಿ ಬಂದ ದಿನಗಳ ಸಂಭವಗಳ ಸ್ಮರಣೆ ತುಂಬಿತ್ತು. ಹೋಗದೇ ಇರಲು ಸಾಧ್ಯವೇ? ಹೋಗದೆ ಇರುವುದು ಅವಶ್ಯವೇ?

"ಆ ಕಡೆ ದರ್ಶನವೇ ಇಲ್ಲ! ಏಕೆ ಹೀಗೆ ಹಠಾತ್ತಾಗಿ ಬದಲಾಯಿಸಿ ಹೋದಿರಿ?"

—ಎಂದು ಕೇಳಿಕೊಂಡೇ ಒಂದು ದಿನ ಸಾಯಂಕಾಲ ಬಂದು ಸೇರಿದರು ನಾರಾಯಣಸ್ವಾಮಿ.

"ಮದರಾಸಿಗೆ ಹೋದಾಗ, ಇಲ್ಲಿ ಮಾಡಬೇಕಾಗಿದ್ದ ಕೆಲಸಗಳು ಹಾಗೆಯೆ ಬಿದ್ದಿದ್ದವು. ಅವುಗಳ ಜೊತೆಗೆ ನಿತ್ಯದ ಕೆಲಸ ಕಾರ್ಯಗಳೂ ಸೇರಿಕೊಂಡಿದ್ದರಿಂದ ನನಗೆ ಪುರಸತ್ತೇ ಸಿಗಲಿಲ್ಲ"

—ಎಂದು ಹೇಳಿದೆ ಅಳುಕುತ್ತ.

"ಹಳೆಯ ಕೆಲಸಗಳು ಇನ್ನೂ ಇವೆಯೇ ?"

"ಎಲ್ಲ ಮುಗಿಯಿತು. ಒಂದು ಸಣ್ಣ ಕಾದಂಬರಿಯನ್ನು ಹೊಸದಾಗಿ ಬರೆಯಲು ತೊಡಗಿದ್ದೇನೆ."

"ಬೆಳಗ್ಗೆ ತಾನೇ ನೀವು ಬರೆಯುವ ಪದ್ಧತಿ. ಸಾಯಂಕಾಲದಲ್ಲಿ ದೇಹಕ್ಕೂ, ಮನಸ್ಸಿಗೂ ವಿಶ್ರಾಂತಿ ಬೇಡವೇ ?"

"ಅಹುದು."

"ನಿತ್ಯವೂ ಸಾಯಂಕಾಲ ನೀವು ಇಲ್ಲಿಗೆ ಬರಬಹುದಲ್ಲ !"

"ಬರುತ್ತೇನೆ."

"ಖಂಡಿತ ಬರಬೇಕು. ನಾಳೆಯಿಂದ ತಪ್ಪದೆ ನಿಮ್ಮನ್ನು ಇದಿರು ನೋಡುತ್ತಿರುತ್ತೇನೆ"

—ಎಂದರು ನಾರಾಯಣಸ್ವಾಮಿ.

ಅವರು ಹೊರಟು ಹೋದರು. ಅವರೊಡನೆ ನಾನು ಮಾತನಾಡಿದ ಮಾತಿನಲ್ಲಿ ಒಂದೇ ಒಂದು ವಿಷಯ ಮಾತ್ರ ನಿಜವಾಗಿತ್ತು. ಹೊಸ ಕಾದಂಬರಿಯೊಂದನ್ನು ಬರೆಯತೊಡಗಿದ್ದೆ. ಅದನ್ನು ಪ್ರಾರಂಭಿಸಲು ಬೇಕಾದ ಕಲ್ಪನೆಯನ್ನೂ ಸ್ಫೂರ್ತಿಯನ್ನೂ ಮದರಾಸಿನ ಸಮುದ್ರ ತೀರವು ನನಗೆ ನೀಡಿತ್ತು. ಕಾದಂಬರಿಯನ್ನು ಪೂರ್ಣವಾಗಿ ಮುಗಿಸಿದ ನಂತರ ಅದನ್ನು ಕ್ರಮವಾಗಿ ಪತ್ರಿಕೆಯಲ್ಲಿ ಪ್ರಕಟಿಸೋಣವೆಂದಿದ್ದೆ. ಇದುವರೆಗೆ ಎರಡು ಅಧ್ಯಾಯಗಳು ಮಾತ್ರ ಬರೆದು ಮುಗಿಸಿದ್ದೆ.

ಸಂಜೆಯ ಹೊತ್ತುಗಳು ನನಗೆ ಯುಗಗಳಂತೆ ಕಳೆದವು. ಸ್ವಾಮಿನಾಥನೂ ಈಗ ನನ್ನೊಡನೆ ಹೆಚ್ಚಾಗಿ ಸೇರುವುದಿಲ್ಲ. ಅವನಿಗೆ ಜೊತೆಯಾಗಿ ಕಾಂತಳು ಸಿಕ್ಕಿಬಿಟ್ಟಳು. ನಾನು ಮದರಾಸಿನಿಂದ ಬರೆದ ಕಾಗದದಿಂದ ಅವರವರಲ್ಲಿದ್ದ ಭಿನ್ನಾಭಿಪ್ರಾಯಗಳು, ಸಂಶಯಗಳು ಮಾಯವಾಗಿತ್ತು. ಯಾವಾಗಲೂ ಇಬ್ಬರೂ ತಮ್ಮೊಳಗೆ ಪಿಸುದನಿಯಲ್ಲಿ ಮಾತನಾಡಿಕೊಂಡೂ, ನಗುತ್ತಲೂ, ಜಗಳವಾಡುತ್ತಲೂ ಕಾಲ ಕಳೆದರು. ಮದುವೆಯ ಮಾರ್ಗದ ಕಡೆಗೆ ಅವರ ಪ್ರೇಮವು ಕೈಬೀಸಿಕೊಂಡು ನಡೆಯಿತು !

ಪ್ರೇಮವನ್ನು ಕುರಿತ ಯೋಚನೆ ಬಂದಾಗಲೆಲ್ಲಾ ನಾನು ಸಂಕಟದಿಂದ ನರಳಿದೆ. ಆ ನೆನಹು ಮಾತ್ರ ಬರದಿದ್ದರೆ....ಅಹುದು; ನನ್ನ ಮಿತ್ರರ ಮನೆಗೆ ನಾನು 'ಧಾರಾಳವಾಗಿ ಹೋಗಿರುತ್ತಿದ್ದೆ.

ಮದರಾಸಿಗೆ ಹೊರಟ ಆ ದಿನ ಮಾತ್ರ ನಾನು ಅಲ್ಲಿಗೆ ಹೋಗದೆ ಇದ್ದಿದ್ದರೆ, ಅಂದು ಅವಳ ಹುಟ್ಟಿದ ಹಬ್ಬವೂ ಒಂದಾಗಿ ಸೇರದೆ ಇದ್ದಿದ್ದರೆ, ಅಂದು ಅವಳು ನನ್ನನ್ನು ಆ ಉಡುಪಿನಲ್ಲೂ ನೋಟದಲ್ಲೂ ಬರಮಾಡಿಕೊಳ್ಳದೆ ಇದ್ದಿದ್ದರೆ ನಾನು ಅಲ್ಲಿಗೆ ಎಷ್ಟು ಸಲ ಬೇಕಾದರೂ ತಡೆಯಿಲ್ಲದೆ ಹೋಗುತ್ತಿದ್ದೆ. ಆದರೆ, ಏಕೆ ಅವಳು ಅಂದು ನನ್ನನ್ನು ಬಾಗಿಲ ಬಳಿ ನಿಂತ ಆ ಬಗೆಯಾಗಿ ಮನತುಂಬಿದ ಮಾತುಗಳಿಂದ "ಬನ್ನಿ" ಎಂದು ಆಹ್ವಾನಿಸಿದಳು? ಏಕೆ ನನ್ನನ್ನು ಒಳಗೆ ಬಿಡಲು ಬಯಸದವಳ ಹಾಗೆ ಕ್ಷಣಹೊತ್ತು ತಡವರಿಸಿದಳು ?—ಮತ್ತೆ ಮದರಾಸಿನ ಸಮುದ್ರ ತೀರದಲ್ಲಿ ಆ ಭಯಂಕರುವಾದ ಸಂಜೆಯ ಸುಂದರ ಹೊತ್ತಿನಲ್ಲಿ ಏಕೆ ನನ್ನನ್ನು ಅವಳು ಗೆಳೆತನದ ಕುರಿತಾದ ಅಂಥಾ ಪ್ರಶ್ನೆಯನ್ನು ಕೇಳಿದಳು? ಏಕೆ 'ಆದರೆ' ಎಂಬ ಪದದಿಂದ ತನ್ನ ಮಾತನ್ನು ಅರ್ಧಕ್ಕೇ ನಿಲ್ಲಿಸಿದಳು? ದೇವರೇ! ನಾನೇ ಈ ರೀತಿ ನಿಷ್ಕಪಟ ಪ್ರೀತಿಗೂ, ನಿಷ್ಕಳಂಕ ಮೈತ್ರಿಗೂ ವಿಚಿತ್ರಾರ್ಥಗಳನ್ನು ಕಲ್ಪಿಸುತ್ತಿದ್ದೇನೋ, ಏನೋ? ಗರಿಕೆಯನ್ನು ಪರ್ವತವೆಂದೂ, ಹನಿಯನ್ನು ಸಮುದ್ರವೆಂದೂ ಭಾವಿಸಿ ಭ್ರಮಿಸುತ್ತಿರುವ ನನ್ನ ವಿಚಿತ್ರ ಮನಸ್ಸಿನ ವಿಪರೀತ ಭಾವನೆಗಳೇ ಇವು? ನಾನೇಕೆ ಭಾವನಾಪ್ರಪಂಚದಲ್ಲಿ ಸಂಚರಿಸುವ ವಿಚಿತ್ರ ಜೀವಿಯಾಗಿ ಹುಟ್ಟಿದೆ?

ನಾನಲ್ಲಿಗೆ ಹೋಗದೆ ಇದ್ದಿದ್ದಕ್ಕೆ ಇನ್ನೊಂದು ಮುಖ್ಯ ಕಾರಣವಿತ್ತು

'ಸತ್ಯ ಕತೆ'ಗಳನ್ನು ಪ್ರಕಟಿಸುವ ಸಚಿತ್ರ ವಿಚಿತ್ರ ಪತ್ರಿಕೆಯೊಂದರಲ್ಲಿ ಸೇತುರಾಮು ಒಂದು ಸಣ್ಣ ಕತೆ ಬರೆದಿದ್ದ. ಆ ಕತೆ ಬಂದಿದ್ದ ಸಂಚಿಕೆಯೊಂದು ನನ್ನ ಸ್ವಂತ ಹೆಸರಿಗೆ ಅಂಚೆಯಲ್ಲಿ ಬಂತು. ತೆರೆದು ನೋಡಿದೆ. ಕತೆಗೆ ಹಾಕಿದ್ದ ಚಿತ್ರಗಳನ್ನು ಕಂಡು ನಾನು ದಿಗ್ಭ್ರಾಂತನಾದೆ. ಮದರಾಸಿನಲ್ಲಿ ನಾನು ಇಳಿದಿದ್ದ ಹೋಟೆಲ್, ಸಮುದ್ರ ತೀರದಲ್ಲಿ ನಾವು ಕುಳಿತಿದ್ದ ಸ್ಥಳ, ನಾರಾಯಣಸ್ವಾಮಿಯವರ ಕಾರಿನಂತೆಯೇ ಇರುವ ಒಂದು ಮೋಟಾರು, ಇವಿಷ್ಟನ್ನೂ ಅದರಲ್ಲಿ ಕಂಡೆ. ಸಮುದ್ರ ತೀರಕ್ಕೆ ಪಕ್ಕದಲ್ಲಿ ಯಾರೋ ಬೇರೆ ಒಬ್ಬ ಪುರುಷನನ್ನೂ ಸ್ತ್ರೀಯನ್ನೂ ಇಟ್ಟು ಚಿತ್ರ ತೆಗೆದಿದ್ದರು. ಕತೆಯನ್ನು ಓದಿದೆ :

'ಕಲೆಯ ಮುಸುಕಿನಲ್ಲಿ ಅವಿತಿರುವ ಒಂದು ಪತ್ರಿಕಾ ಸಂಪಾದಕರ ಅಂತರಂಗದ ಜೀವನದಲ್ಲಿ ಇದು ಒಂದು ದಿನದ ಕತೆ'

—ಎಂಬ ಮಾತುಗಳಿಂದ ಅದು ಮುಕ್ತಾಯಗೊಂಡಿತ್ತು.

'ಯೋಗ್ಯರೆಂದೂ, ಸಂಭಾವಿತರೆಂದೂ ನಟಿಸುವ ನೀಚರ ಜೀವನವನ್ನು ಇನ್ನು ಮೇಲೆ ನಮಗಾಗಿ, ಸೇತುರಾಮನ್‌ರವರು ಚಿತ್ರಿಸಲಿದ್ದಾರೆ'

—ಎಂದು ಆ ಪತ್ರಿಕೆಯ ಸಂಪಾದಕರೂ ಟಿಪ್ಪಣಿ ಬರೆದಿದ್ದರು.

ಈ ಕತೆಯನ್ನು ನಾರಾಯಣಸ್ವಾಮಿ ಇದುವರೆಗೆ ಓದದೆ ಇರುವುದಿಲ್ಲ. ನನಗೆ ನೇರವಾಗಿ ಕಳುಹಿಸಿರುವ ಸೇತುರಾಮನು ಅವರಿಗೆ ಕಳುಹಿಸದೆ ಇರಲು ಸಾಧ್ಯವಿಲ್ಲ. ಈ ಕತೆಯನ್ನು ಓದಿದ ಬಳಿಕ ನಾನು ಯಾವ ಮುಖದಿಂದ ಅವರನ್ನು ನೋಡುವುದು? ಹೇಗೆ ಹೋಗಿ ಅವರ ಮನೆ ಬಾಗಿಲಲ್ಲಿ ಕಾಲಿಡುವುದು? ವಲ್ಲದ ನೆಂಟನ ಹಾಗೆ ಇರಲು ನಾನು ಬಯಸಲಿಲ್ಲ.

ಆದರೆ ನಾರಾಯಣಸ್ವಾಮಿ ಸ್ವತಃ ನನ್ನ ಹತ್ತಿರ ಬಂದು ಆಹ್ವಾನಿಸಿದಾಗ ನಾನು ಎಲ್ಲವನ್ನೂ ಮರೆತುಬಿಟ್ಟೆ. ಅವರ ಮುಖದಲ್ಲಿ ಪ್ರೀತಿಯನ್ನು

ಬಿಟ್ಟರೆ ಬೇರೆ ಯಾವ ವಿಧವಾದ ಮಾಲಿನ್ಯವೂ ಕಾಣಲಿಲ್ಲ. ಅವರಿಗೆ ಮಾತು ಕೊಟ್ಟ ಹಾಗೆ ಮಾರನೆಯ ದಿನ ಸಂಜೆ ಅಲ್ಲಿಗೆ ಹೊರಟೆ.

ನಾರಾಯಣಸ್ವಾಮಿ ಒಬ್ಬರೇ ತೋಟವನ್ನು ಸುತ್ತ ನೋಡುತ್ತಿದ್ದರು. ದೊಡ್ಡ ತೋಟವಾದ್ದರಿಂದ ಅವರ ಜೊತೆಯಲ್ಲಿ ಅದರಲ್ಲಿ ನಡೆದುಕೊಂಡು ಹೋಗುತ್ತಿದ್ದರೆ ನನಗೆ ಬಹಳ ಹಿತವಾಗಿತ್ತು. ಮರದ ನೆರಳಿನಲ್ಲಿ ಮೆತ್ತಗೆ ನಡೆದೆವು. ದಾರಿಯೆಲ್ಲವೂ ಹೂವಿನ ಹಾಸಿಗೆಯಾಗಿ ನಡೆದು ಹೋಗುತ್ತಿದ್ದರೆ ಪಾದಗಳಿಗೆ ತಣ್ಣಗಿತ್ತು. ಕಾಲು ಗಂಟೆಯ ಹೊತ್ತು ತಿರುಗಾಡಿದ ಮೇಲೆ ಮರದಡಿಯಲ್ಲಿದ್ದ ಬೆಂಚೊಂದರ ಮೇಲೆ ಸ್ವಲ್ಪ ಹೊತ್ತು ಕುಳಿತೆವು. ಇಬ್ಬರೂ ಹೆಚ್ಚಾಗಿ ಮಾತನಾಡಿಕೊಳ್ಳಲಿಲ್ಲ. ಅನಂತರ ಎದ್ದು ಪದ್ಧತಿಯಂತೆ ಹೊತ್ತುಗಳೆಯುವ ಆ ಮಂಟಪಕ್ಕೆ ಬಂದೆವು. ಅಲ್ಲಿ ಮೇಜಿನ ಮೇಲೆ ತಿಂಡಿ ತಯಾರಾಗಿತ್ತು. ಗೋದಿಯ ಹಲ್ವ, ವಡೆ, ಹಣ್ಣುಗಳು....

ಕೂಜಾದಲ್ಲಿ ಕಾಫಿಯೊಂದಿಗೆ ನಮ್ಮ ಬಳಿಗೆ ಬಂದಳು ಲಲಿತ.

"ಇಷ್ಟು ದಿವಸ ಈ ಕಡೆಯೇ ಕಾಣಲಿಲ್ಲವಲ್ಲ !"

—ಎಂದಳು.

ಲಲಿತಳನ್ನು ದಿಟ್ಟಿಸಿ ನೋಡಿದೆ. ಲಲಿತಳೇ ಅವಳು? ಅವಳು ಗುರ್ತು ಸಿಗದಷ್ಟು ಬದಲಾಯಿಸಿ ಹೋಗಿದ್ದಳು. ಹತ್ತು ಹನ್ನೆರಡು ದಿನ ಕಾಹಿಲೆಯಲ್ಲಿ ಹಾಸಿಗೆ ಹಿಡಿದಿದ್ದು ಇದೀಗ ಎದ್ದವರು ಹೇಗಿರುತ್ತಾರೋ ಹಾಗಿದ್ದಳು. ತಲೆಯನ್ನೂ ಸರಿಯಾಗಿ ಬಾಚಿ ಮುಡಿಸಿಕೊಳ್ಳಲಿಲ್ಲ ಹಳೆಯ ಸೀರೆಯನ್ನೂ ಕುಪ್ಪಸವನ್ನೂ ತೊಟ್ಟಿದ್ದಳು. ಊರಿನ ಪ್ರಬಲ ಪ್ರಮುಖರಾದ ನಾರಾಯಣಸ್ವಾಮಿಯವರ ಹೆಂಡತಿಯಾಗಿ ಅಂದು ಅವಳು ಕಾಣಲಿಲ್ಲ. ಮೊಟ್ಟಮೊದಲು ಅವಳನ್ನು ನಾನು ಸಂಧಿಸಿದಾಗ ಅವಳಲ್ಲಿ ಕಂಡ ಸರಳತೆಯೂ ಇಂದು ಅವಳಲ್ಲಿಲ್ಲ. ಅವಳು ಒಂದು ಬಾಡಿದ ಹೂವಿನಂತಿದ್ದಳು. ಆ ಮನೆಯ ಅಡಿಗೆಯವಳ ಮಗಳಂತೆ ಅವಳು ತನ್ನನ್ನು ಮಾಡಿಕೊಂಡಿದ್ದಳು. ಮುಖವು ಸ್ವಲ್ಪ ದೊಡ್ಡದಾಗಿಯೂ ಕಣ್ಣುಗಳು ಕೆಂಪಾಗಿಯೂ ಇದ್ದುವು.

ನಾನು ಮತ್ತೆ ಅವಳನ್ನು ನೋಡಿದೆ. ನನ್ನನ್ನು ನೋಡದವಳ ಹಾಗೆ ಅವಳು ಕಾಫಿಯನ್ನು ಟಮ್ಲರಿನಲ್ಲಿ ಸುರಿಯುತ್ತಿದ್ದಳು.

"ಹಲ್ವಾ ಹೇಗಿದೆ ಸೋಮು? ನೀವು ಇವತ್ತು ಬರುವುದಾಗಿ ಲಲಿತಳಿಗೆ ಹೇಳಿದೆ. ಅವಳ ಕೈಬಿದ್ದರೇನೇ ಯಾವ ಪದಾರ್ಥಕ್ಕೂ ವಿಶೇಷ ರುಚಿ ಬಂದುಬಿಡುತ್ತೆ; ಅಲ್ಲವೆ?"

—ಎಂದು ನಾರಾಯಣಸ್ವಾಮಿ ನಕ್ಕರು.

"ಹಾಗಾದರೆ ಇನ್ನೂ ಹೆಚ್ಚು ದಿನ ಬಿಟ್ಟುಕೊಂಡೇ ಬರುತ್ತೇನೆ. ಆಗ ತಾನೇ ಈ ಹಲ್ವಾ ಸಿಗುವುದು?"

"ಬೇಡಿ! ನಿತ್ಯವೂ ಮಾಡುವಂತೆ ಹೇಳುತ್ತೇನೆ; ಬನ್ನಿ."

ಲಲಿತ ಮೆತ್ತಗೆ ಮುಗುಳ್ನಗೆಯನ್ನು ಬೀರಿದಳು.

ಅಂದು ಲಲಿತ ನನ್ನ ಹತ್ತಿರ ಸರಿಯಾಗಿ ಮುಖಕೊಟ್ಟು ಮಾತನಾಡಲಿಲ್ಲ. ಅದರ ನಂತರ ಕೆಲವು ದಿನಗಳು ಹಾಗೆಯೇ ನಡೆದುಕೊಂಡಳು. ನಮ್ಮ ಸರಳ ಮಧುರ ಸಂಭಾಷಣೆಗೆ ಅಡ್ಡಿಯಾಗಿ ಅದು ಹೇಗೋ ಒಂದು ತೆರೆ ಬಿದ್ದುಹೋಯಿತು. ಆದರೆ ಆ ತೆರೆಯ ಹಿಂದೆ ಅವಳ ಪ್ರೀತಿಯ ಕಾರ್ಯಗಳು ವಿಶ್ವರೂಪ ತಾಳುತ್ತಿರುವುದನ್ನು ಕಂಡೆ. ಅವಳ ಮನಸ್ಸಿನ ರೀತಿಯನ್ನು ಕಂಡು ನಾನು ಅಲ್ಲಿಗೆ ಬರದೇ ಇದ್ದು ಬಿಡಬಾರದೆಂಬುದಕ್ಕಾಗಿ ಅವಳು ನನ್ನಲ್ಲಿ ಹೆಚ್ಚು ಮಮತೆ ತೋರಿದಳು. ಒಂದೊಂದು ದಿನವೂ ನಾನು ಅಲ್ಲಿಂದ ಹೊರಟಾಗ ಮಾರನೆಯ ದಿನಕ್ಕೆಂದು ನನಗೆ ಕೆಲವು ಕೆಲಸಗಳನ್ನು ಕೊಡುತ್ತಿದ್ದಳು.

"ವಿಮರ್ಶೆಗೆಂದು ಬಂದಿರುವ ಒಳ್ಳೆಯ ಕಾದಂಬರಿಗಳಿದ್ದರೆ ತೆಗೆದು ಕೊಂಡು ಬನ್ನಿ; ಪತ್ರಿಕೆಯನ್ನು ತೆಗೆದುಕೊಂಡು ಬನ್ನಿ" ಎಂದು ಮುಂತಾಗಿ ಏನಾದರೂ ಹೇಳಿ ಕಳುಹಿಸುತ್ತಿದ್ದಳು ಓದುವುದಕ್ಕೆ ಅವಳ ಮನೆಯಲ್ಲಿಲ್ಲದ ಪುಸ್ತಕವೂ ಪತ್ರಿಕೆಯೇ! ಇಲ್ಲ! ಅವಳು ಬಯಸಿದರೆ ಮರುಕ್ಷಣದಲ್ಲೇ ಒಂದು ಪುಸ್ತಕದಂಗಡಿಯನ್ನೇ ಕೊಂಡುಕೊಳ್ಳಲು ತಯಾರಾಗಿದ್ದರು ಅವಳ ಪತಿ.

ಲಲಿತಳು ಈಗ ಬೇಕೆಂದು ತಲೆಯನ್ನು ಬಾಚಿ ಹೂ ಮುಡಿದುಕೊಳ್ಳು ವುದಿಲ್ಲ; ಬೇಕೆಂದೇ ಒಳ್ಳೆಯ ಉಡುಪನ್ನು ಧರಿಸುವುದಿಲ್ಲ; ಬೇಕೆಂದೇ ತನ್ನನ್ನು ಸನ್ಯಾಸಿನಿ ವೇಷಕ್ಕೆ ತಿರುಗಿಸಿಕೊಳ್ಳುತ್ತಿದ್ದಳು. ಇದರ ಅರ್ಥ ವೇನು? ನನಗೆ ಏನೂ ತಿಳಿಯದೆಂದು ಭಾವಿಸಿದಳೇ!

ಅವಳು ತನ್ನ ಮನೋಚಾಂಚಲ್ಯವನ್ನೂ ಅದರ ಫಲವನ್ನೂ ಅರಿತು ಕೊಂಡಳು. ಒಂದೆರಡು ಬಾರಿ ಅವಳ ಹೃದಯವು ನನ್ನೆದುರಿನಲ್ಲಿ ಅವಳನ್ನರಿ ಯದೆ ಹೊರಬಿದ್ದಿತಲ್ಲವೆ? ಅವಳ ಹುಟ್ಟಿದ ಹಬ್ಬದಂದು ಅವಳನ್ನು ದಹಿಸಿದ ಬಯಕೆಗಳನ್ನು ಈಗ ಅವಳು ದಹಿಸಿ ಭಸ್ಮಮಾಡಲು ಸಂಕಲ್ಪಿಸಿದ್ದಳು. ಮದರಾಸಿನ ಸಮುದ್ರ ತೀರದಲ್ಲಿ ಅವಳನ್ನು ವಂಚಿಸಲು ನೋಡಿದ ಆ ಬಯಕೆಗಳನ್ನೇ ಇಂದು ಅವಳು ವಂಚಿಸಿ ನಾಶಗೊಳಿಸಲು ತೊಡಗಿದ್ದಳು. ಅವಳ ಹೃದಯದೊಳಗಿನ ಈ ಎಡೆಬಿಡದ ತುಮುಲವನ್ನು ನಾನು ಅರಿತು ಕೊಂಡೆ. ಆದರೆ ಅವನ್ನು ನಿವಾರಿಸಲು ನಾನು ಪ್ರಯತ್ನಿಸಿದೆನೇ? ಪ್ರಯತ್ನಿಸಿದ್ದರೆ ಆಗಿರುತ್ತಿತ್ತೆ? ನಾನೇಕೆ ಪ್ರಯತ್ನಿಸಲಿಲ್ಲ?

ಏಕೆ ಗೊತ್ತೆ?

ನಾನು ಆ ಊರನ್ನು ಬಿಟ್ಟೇ ಕೆಲವು ತಿಂಗಳು ಹೊರ ಊರಿಗೆ ಹೋಗಿರಬಹುದು. ಪತ್ರಿಕೆಯ ಕೆಲಸಕ್ಕೆ ನಾನು ಖುದ್ದು ಪತ್ರಿಕಾಲಯ ದಲ್ಲಿದ್ದೇ ಕೆಲಸ ಮಾಡಬೇಕೆಂಬುದೇನಿಲ್ಲ. ನನ್ನ ಗ್ರಾಮದಲ್ಲಿದ್ದುಕೊಂಡೇ ಬರೆದು ಕಳುಹಿಸಬಹುದು. ಹಾಗೆ ಹೊರ ಊರಿಗೇ ಹೋಗದಿದ್ದರೂ ಇಲ್ಲಿದ್ದುಕೊಂಡೇ, ಯಾವುದಾದರೂ ಕಾರಣ ಹೇಳಿಬಿಟ್ಟು ಅವರ ಮನೆಗೆ ಹೋಗುವುದನ್ನು ಪೂರ್ತಿಯಾಗಿ ನಿಲ್ಲಿಸಿರಬಹುದು. ಆದರೆ ನಾನು ಅದೆಲ್ಲ ವನ್ನೂ ಮಾಡಲಿಲ್ಲ.

ಏಕೆ ಗೊತ್ತೆ?

ಅದನ್ನು ನಾನು ಈಗ ನಿಮಗೆ ಹೇಳುವುದಿಲ್ಲ. ತಿಳಿಸುವ ಕಾಲ ಇನ್ನೂ ಬಂದಿಲ್ಲ. ಇನ್ನು ಆ ಕಾಲವು ಎಂದೆಂದಿಗೂ ಬರದೇ ಇದ್ದರೂ ಇರ ಬಹುದು. ಮನಸ್ಸಿನಲ್ಲಿ ಭಾವಿಸುವುದನ್ನೆಲ್ಲ ಒಬ್ಬನು ಹೊರಗೆ ಹೇಳಬಹುದೇ?

ಆಮೇಲೆ ಹಾಗೆ ಭಾವಿಸುವುದೇ ತಪ್ಪು ಎಂದು ಈ ಸಮಾಜವು ನನ್ನ ಮೇಲೆ ತಿರುಗಿ ನಿಂತು ಅಪವಾದವನ್ನು ಹೊರಿಸದಿರುವುದೇ?

ಒಂದು ಮಾತ್ರ ಹೇಳುತ್ತೇನೆ: ಪ್ರೀತಿ ಎಂಬ ಸುಂದರವಾದ ಪದವು ಬಹಳ ಕ್ರೂರವಾದುದು. ಪ್ರೀತಿಯ ಶ್ರೇಷ್ಠತೆಯಿಂದ ಜಗತ್ತಿನಲ್ಲಿ ಅರಳಿರುವ ಸಾವಿರಾರು ಪ್ರೇಮ ಕತೆಗಳನ್ನು ಚರಿತ್ರೆಗಳು ಹೇಳುತ್ತವೆ. ಆದರೆ ಆ ಕತೆಗಳ ಸುಖಾಂತ್ಯದಲ್ಲಿರುವ ರಕ್ತ ಕಣ್ಣೀರನ್ನೂ, ಹೃದಯ ಸಂತಾಪವನ್ನೂ, ಹೊರಗೆಡವಲಾಗದ ವೇದನೆಯ ಬಗ್ಗೆ ಏಕೆ ಯಾರೂ ಚಿಂತಿಸುವುದಿಲ್ಲ? ಪ್ರೀತಿಯಿಂದ ಉಂಟಾದ ಕಾವು ನೋವುಗಳು, ಪ್ರೀತಿಯಿಂದ ಹಾಳಾಗಿ ನರಳುವ ಮನುಷ್ಯರು, ಪ್ರೀತಿಯಿಂದಲೇ ಸಂಭವಿಸಿದ ಕೊಲೆ, ಸುಲಿಗೆ, ಲೂಟಿಗಳು ಎಷ್ಟೆಷ್ಟೋ?

'ಪ್ರೀತಿಯೇ ಶಿವ' ಎಂಬ ತತ್ವವನ್ನು ನಾನು ಒಂದೇ ಒಂದು ವಿಧದಲ್ಲಿ ಅಂಗೀಕರಿಸುತ್ತೇನೆ. ಪ್ರೀತಿಯ ದೈವವಾದ ಪರಮಶಿವನು ಸ್ವಲ್ಪವೂ ಚಿಂತಿಸದೆ ಸಾವಿನ ಬೀಡಾದ ಸ್ಮಶಾನದಲ್ಲಿ ಆನಂದ ತಾಂಡವವಾಡುತ್ತಾನಲ್ಲವೆ? ನಾನು ಆ ನಿರ್ದಯ ಪ್ರೀತಿಯನ್ನು ನನ್ನ ಬೆಂದ ಹೃದಯದಿಂದ ಶಪಿಸುತ್ತೇನೆ.

ಅಂದು ಭಾನುವಾರ. ಮಧ್ಯಾಹ್ನ ಮೂರು ಗಂಟೆಯಿರಬಹುದು. ಆಫೀಸಿನ ಹೊರ ಅಂಗಳದಲ್ಲಿ ಕುಳಿತು ಓದುಗರು ಬರೆದ ಕಾಗದಗಳನ್ನು ಓದುತ್ತಿದ್ದೆ. ನಾರಾಯಣಸ್ವಾಮಿಯವರ ಕಾರು ಆ ಕಡೆಯಾಗಿ ಹೋಯಿತು. ಅವರು ನನ್ನನ್ನು ನೋಡಿಬಿಟ್ಟರು. ಕಾರು ನಿಂತಿತು. ಇಳಿದು ಬಂದರು. ಇಬ್ಬರೂ ಮಾತಿಗೆ ಮೊದಲು ಮಾಡಿದೆವು. ಜಗತ್ತಿನಲ್ಲಿರುವ ಎಷ್ಟೋ ವಿಷಯಗಳನ್ನೆಲ್ಲವೂ ಸುತ್ತಿಕೊಂಡು ಬಂತು ನಮ್ಮ ಮಾತು. ಆಫೀಸ್ ಹುಡುಗ ಜಾನಕಿರಾಮ ತಣ್ಣಗಿರುವ ನೀರನ್ನು ತಂದು ಅವರ ಬಳಿ ಇಟ್ಟನು. ಬೇರುಗಳಿಂದ ಮಾಡಿದ ಬೀಸಣಿಗೆಯೊಂದನ್ನು ನೀರಿನಲ್ಲಿ ಒದ್ದೆಮಾಡಿ ಅವರಿಗೆ ಕೊಟ್ಟೆ. ಅವರು ತಣ್ಣಗೆ ಗಾಳಿ ಬೀಸಿಕೊಳ್ಳುತ್ತಾ ಹೆಚ್ಚು ಉತ್ಸಾಹಿಗಳಾಗಿ ಮಾತನಾಡುತ್ತ ಬಂದರು.

"ಒಂದು ವಿಷಯ ಕೇಳುತ್ತೇನೆ. ಎಲ್ಲರಿಗೂ ಸಾಮಾನ್ಯವಾದ ವಿಷಯ ಅದು. ನೀವೇನೂ ತಪ್ಪಾಗಿ ಭಾವಿಸಬಾರದು."

"ಧಾರಾಳವಾಗಿ ಕೇಳಿ; ನನ್ನ ಹತ್ತಿರ ನೀವು ಏನು ಬೇಕಾದರೂ ಕೇಳಬಹುದು"

—ಎಂದೆ.

"'ಕಲಾಭಿರುಚಿಯುಳ್ಳವರು ಸುಲಭವಾಗಿ ಭಾವನೆಗಳ ವಶರಾಗುತ್ತಾರೆ. ಆದ್ದರಿಂದ ಮನುಷ್ಯತ್ವದಿಂದ ಅವರು ಜಾರುವುದಕ್ಕೆ ಹೆಚ್ಚು ಹೊತ್ತು ಬೇಕಾಗಿಲ್ಲ' ಎನ್ನುತ್ತಾರಲ್ಲವೆ? ಇದಕ್ಕೆ ನೀವು ಏನು ಹೇಳುತ್ತೀರಿ?"

"ಹೂವಿನ ಸುತ್ತಲೂ ದುಂಬಿಗಳು ಸುತ್ತುವುದು ಹೂವಿನ ತಪ್ಪಲ್ಲ ಜೇನಿನ ಸುತ್ತಲೂ ನೊಣಗಳು ಮುಸುಕುವುದು ಜೇನಿನ ದೋಷವಲ್ಲ; ಕಲಾವಿದರಿಗೆ ಉಂಟಾಗುವ ಪರಿಸ್ಥಿತಿಗಳಲ್ಲಿ ಕಲೆಯ ಗಂಧವನ್ನೇ ಅರಿಯದವರು ಯಾವ ರೀತಿ ವರ್ತಿಸುತ್ತಾರೆಂಬುದೇ ಗಮನಿಸಬೇಕಾದ ಅಂಶ. ಶೀಲ, ಸ್ವಭಾವಗಳು ಮಾನವೀಯತೆಗೇ ಅಸ್ತಿಭಾರವೆಂಬುದನ್ನು ನಾನು ಮರೆತಿಲ್ಲ. ಆದರೆ ಕಲಾವಿದರಲ್ಲಿ ಲೋಪವೆಣಿಸುವುದೇ ತಪ್ಪೆಂದು ನನ್ನ ಭಾವನೆ. ಅವರಿಗೆ ಹೃದಯವಿದೆ, ವಿಚಾರಮಾಡಿ ನೋಡಲು. ಶರೀರ ಸುಖಕ್ಕಿಂತಲೂ ಆತ್ಮ ಸುಖದಿಂದ ಬಾಳುವವರು ಕಲಾವಿದರು."

ಅವರು ನಿಟ್ಟುಸಿರು ಬಿಟ್ಟರು.

"ತನು, ಮನ, ಆತ್ಮ...."

ಮುಂತಾಗಿ ತಮ್ಮೊಳಗೇ ಹೇಳಿಕೊಂಡರು.

"ಕಲಾವಿದನು ಆತ್ಮಜ್ಞಾನಿಯೆಂತಲ್ಲ. ಆದರೂ ಶರೀರ ಸುಖಕ್ಕೆಂದೇ ಜೀವಿಸುತ್ತಾರಲ್ಲಾ ಅವರಿಂದ ಅವನು ಬೇರೆಯಾದವನು."

"ಶರೀರ ಸುಖವಿಲ್ಲದೆಯೇ ಆತ್ಮಸುಖದಿಂದಲೇ ಮಾನವನು ಬಾಳಲಾಗುತ್ತದೆಯೇ?"

ಈ ಪ್ರಶ್ನೆ ನನ್ನನ್ನು ದಿಙ್ಮೂಢನನ್ನಾಗಿ ಮಾಡಿತು. ಬೇರೆ ಯಾರಾದರೂ ಕೇಳಿದ್ದರೆ ಏನೂ ಯೋಚಿಸದೆ ಉತ್ತರಿಸುತ್ತಿದ್ದೆ. ನಾರಾಯಣಸ್ವಾಮಿ

ಯುವರೇ ಇದನ್ನು ನನ್ನ ಹತ್ತಿರ ಕೇಳಿಬಿಟ್ಟರು ! ನನ್ನ ತಲೆಯೊಳಗೆ ಬಾಧೆಯಾಯಿತು. ಕ್ಷಣ ಹೊತ್ತಿನಲ್ಲಿ ಯಾವುದಾವುದನ್ನೋ ನೆನೆದು ನರಳಿದೆ. ಸೇತುರಾಮ ಅವರ ಬಗ್ಗೆ ಹೇಳಿದ ಮಾತುಗಳು ನನ್ನ ತಲೆನೋವನ್ನು ಹೆಚ್ಚಿಸಿತು—ಆತ್ಮಗಳ ಮಿಲನದಿಂದಲೇ ಬಾಳಲಾಗುವುದೇ ?

"ಬಹಳ ಯೋಚಿಸುತ್ತಿದ್ದೀರೇ ?"

—ಎಂದರು ಮಿತ್ರರು.

"ಬಾಳಲಾಗುವುದಿಲ್ಲ. ಪರಿಸ್ಥಿತಿಗಳ ಪ್ರಭಾವಕ್ಕೆ ಬಾಗಿ ಕೆಲವರು ಆ ರೀತಿ ಬಾಳುತ್ತಾರೆ; ಧ್ಯೇಯಕ್ಕಾಗಿ ಕೆಲವರು ದೇಹವನ್ನು ದಂಡಿಸುತ್ತಾರೆ."

"ಪರಿಸ್ಥಿತಿಗಳ ಸ್ವಭಾವ....ಹುಂ ! ಪರಿಸ್ಥಿತಿಗಳ ಪ್ರಭಾವ ಕೆಲವು ವೇಳೆ ಸರಿಯಾದ ಶಿಕ್ಷೆಯಾಗಿಯೂ ಪರಿಣಮಿಸುತ್ತದೆ."

ನನಗೇನೂ ತೋಚಲಿಲ್ಲ. ಆದರೆ ಅವರ ಗಂಟಲಿಂದ ಹೊರಬಂದ ನುಡಿಗಳ ನಡುಕದಿಂದ ಅವರೆಷ್ಟು ನೊಂದಿದ್ದಾರೆಂಬುದನ್ನು ಅರಿತುಕೊಂಡೆ. ಇಬ್ಬರೂ ಮೌನವಾಗಿ, ತಗ್ಗಿಸಿದ ತಲೆಯನ್ನು ಮೇಲಕ್ಕೆತ್ತದೆ, ಬಿರುಗಾಳಿಯ ನಂತರ ನೆಲೆಸುವ ಶಾಂತತೆಯಲ್ಲಿ ಸಿಕ್ಕಿದವರ ಹಾಗೆ ಕದಲದೆ ಕುಳಿತಿದ್ದೆವು.

"ಸೋಮು !"

—ಎಂದು ಭಾವನಾವಶರಾಗಿ ನನ್ನ ಎರಡೂ ಕೈಗಳನ್ನು ತಟ್ಟನೆ ಹಿಡಿದುಕೊಂಡರು. ಅವರ ಮುಖದಲ್ಲಿ ಮೇರೆಯಿಲ್ಲದ ದುಃಖದ ಕಪ್ಪು ಛಾಯೆಯು ಅಡರಿತ್ತು.

"ನಿಮ್ಮನ್ನು ನಾನು ಎಂದೂ ತಪ್ಪಾಗಿ ಭಾವಿಸುವುದಿಲ್ಲ. ನೀವೂ ನನ್ನನ್ನು ಹಾಗೆ ಭಾವಿಸುವುದಿಲ್ಲವೇ ?"

ನನ್ನ ಹೃದಯವು ತಲ್ಲಣಿಸುತ್ತಿರುವುದನ್ನು ನಿಲ್ಲಿಸಿತು. ನೀರು ತುಂಬಿದ ಕಣ್ಣುಗಳಿಂದ ಅವರನ್ನು ನೋಡಿದೆ. ಅವರ ಮಾತಿನ ಅರ್ಥ ನನ್ನ

ಕಣ್ಣ ಮುಂದೆ ಮಿಂಚಿನಂತೆ ಸುಳಿದು ಹೋಯಿತು. ನನ್ನ ಕುರಿತೂ ಲಲಿತಳ ಕುರಿತೂ ಸೇತುರಾಮನು ಬರೆದ ಆ ಕತೆ! ಎಷ್ಟು ದೂರ ಅವರನ್ನು ಅದು ಬಾಧಿಸಿದೆಯೆಂಬುದನ್ನು ಇವತ್ತು ತಾನೇ ತಿಳಿದುಕೊಂಡೆ.

ಅವರನ್ನು ಕುರಿತ ಯೋಚನೆಗಳು ನನ್ನ ಮನೋನೇತ್ರಗಳ ಮುಂದೆ ಸುಳಿದವು. ಇನ್ನೂ ಅವರನ್ನು ನಾನು ಸರಿಯಾಗಿ ಅರ್ಥಮಾಡಿಕೊಳ್ಳಲಾಗಲಿಲ್ಲ. ಮೊದಲ ಸಂದರ್ಶನದಲ್ಲಿ ಅವರು ನಡೆದುಕೊಂಡ ರೀತಿ, ಅನಂತರ ಅವರಲ್ಲಿ ವ್ಯಕ್ತಗೊಂಡ ಹಸುಗೂಸಿನ ಹೃದಯ, ಅವರ ಪ್ರೇಮ, ಮದುವೆ, ಗ್ರಂಥಾವಲೋಕನ, ಕಲಾಭಿರುಚಿ ಎಲ್ಲವೂ ಒಂದೇ ಗೊಂದಲವಾಗಿ ಕಂಡಿತು ನನಗೆ. ಕತೆಗಳಲ್ಲೂ ನಾಟಕಗಳಲ್ಲೂ ಬರಹಗಾರರು ಕೆಲವರು ಪಾತ್ರ ವೈಶಿಷ್ಟ್ಯವೆಂದು ಹೇಳಿ, ಕತೆಯ ಮೊದಲಿನಿಂದ ಕೊನೆಯವರೆಗೆ ಒಂದೇ ರೀತಿಯಾಗಿ ಮನುಷ್ಯನ ಸ್ವಭಾವಗಳನ್ನು ಚಿತ್ರಿಸುತ್ತಾರೇ, ಆ ವ್ಯಾಕರಣವನ್ನು ನಾನು ನಂಬುವುದೇ? ಅಥವಾ ಇಗೋ, ನನ್ನೆದುರಿನಲ್ಲಿ ಹಲವಾರು ಸಂದರ್ಭಗಳ ವಿಶಿಷ್ಟತೆಗಳಾಗಿ ಒಂದೇ ರೂಪಿನಲ್ಲಿ ಕಾಣುವ ಈ ಪ್ರೀತಿಯ ಮನುಷ್ಯನ ನಿತ್ಯಜೀವನವನ್ನು ನಂಬುವುದೇ?

ಹೊತ್ತಾಗುತ್ತ ಬಂತು.

"ಇಂದು ಭಾನುವಾರ. ಮನೆಗೆ ಬನ್ನಿ. ಒಳ್ಳೆಯ ಸಿನಿಮಾ ಯಾವುದಾದರಿದ್ದರೆ ಹೋಗೋಣ. ಅಥವಾ ಮನೆಯಲ್ಲೇ ಹಾಯಾಗಿ ಕುಳಿತು ಮಾತನಾಡೋಣ."

ನಾನು ತಡಬಡಿಸಿದೆ.

"ಏನು ಯೋಚಿಸುತ್ತೀರಿ?"

"ಏನೂ ಇಲ್ಲ. ನಾನು ಅಲ್ಲಿಗೆ ಬರದೇನೇ ಇದ್ದಿದ್ದರೆ ನಿಮಗೆ ಈ ಕಷ್ಟವು ಬರುತ್ತಿರಲಿಲ್ಲ ಅಲ್ಲವೆ? ನನ್ನನ್ನು ಕ್ಷಮಿಸಿರಿ ನಾನು ಇನ್ನು ಎಲ್ಲಿಗೂ ಬರುವುದಿಲ್ಲ"

—ತಲೆಯನ್ನು ಕೆಳಕ್ಕೆ ಬಾಗಿಸಿಕೊಂಡು, ಅವರನ್ನು ನೆಟ್ಟಗೆ ನೋಡಲು ನಾಚಿದವನಂತೆ ಈ ಮಾತುಗಳನ್ನು ಹೇಳಿದೆ.

ಅವರು ನಕ್ಕರು. ಎದ್ದು ನಿಂತು ನನ್ನ ಕೈಯನ್ನು ಹಿಡಿದರು.

"ಏಳಿ ಸೋಮು. ಹೇಡಿಯಂತೆ ಯಾವುದನ್ನೂ ನನ್ನ ಹತ್ತಿರ ಹೇಳಬೇಡಿ. ಈ ಲೋಕವು ಬಾಳಲರಿಯದವನಿಗಾಗಿ ಮೊಸಳೆ ಕಣ್ಣೀರಿಡುತ್ತದೆ; ಬಾಳಲು ತವಕಗೊಳ್ಳುವವನ ಮಾರ್ಗಕ್ಕೆ ಅಡ್ಡಿಯಾಗಿ ಬಂದು ನಿಲ್ಲುತ್ತದೆ. ನಿಂದಿಸುವವರಿಗಾಗಿ ಹೆದರಿದರೆ ಬಾಳುವುದಕ್ಕೇ ಸಾಧ್ಯವಿಲ್ಲ"

—ಎಂದರು ನಾರಾಯಣಸ್ವಾಮಿ.

ನಾನು ಅವರೊಂದಿಗೆ ಎದ್ದೆ. ಕಾರಿನ ಬಾಗಿಲನ್ನು ತೆರೆದು ಒಳಗೆ ಕುಳಿತಾಗ, ಬೀದಿಯ ಕಡೆಯಿಂದ ಬಂದ ಸ್ವಾಮಿನಾಥನೂ ಲಲಿತಳೂ ನನ್ನನ್ನು ದುರುಗುಟ್ಟಿ ನೋಡಿಕೊಂಡೇ ಒಳಗೆ ಹೋದರು.

೧೧

ಜೀವನದಲ್ಲಿ ಪ್ರತಿಯೊಬ್ಬರಿಗೂ ಮರೆಯಲಾರದ ಸಂಭವಗಳು ಏರ್ಪಡುವ ದಿನಗಳೋ ಕ್ಷಣಗಳೋ ಕೆಲವು ಇರುತ್ತವೆಯಲ್ಲವೆ? ಅವು ಆನಂದದಿಂದ ತುಂಬಿರಬಹುದು; ದುಃಖದಿಂದ ಆವರಿಸಿರಬಹುದು. ಈ ದಿನ ನನ್ನ ಹೃದಯವನ್ನು ಎರಡು ಹೋಳಾಗಿ ಛೇದಿಸಿದ ದಿನ; ನನ್ನ ಜೀವವನ್ನೂ ಭಾವವನ್ನೂ ಹಿಂಡಿ ಹೀರಿದ ದಿನ; ನನ್ನನ್ನು ಗರಿಕೆಯನ್ನಾಗಿ ಮಾಡಿ ಬಿರುಗಾಳಿಯಲ್ಲಿ ಅಲೆಯ ಬಿಟ್ಟ ದಿನ.

ಆಫೀಸಿನಿಂದ ನನ್ನನ್ನು ಕರೆದು ತಂದ ನಾರಾಯಣಸ್ವಾಮಿ,

"ಮಹಡಿ ಕೊಠಡಿಯಲ್ಲಿ ಕುಳಿತಿರಿ. ಐದು ನಿಮಿಷದಲ್ಲಿ ಬಂದು ಬಿಡುತ್ತೇನೆ"

—ಎಂದು ಹೇಳಿಬಿಟ್ಟು ಮನೆಯೊಳಗೆ ಹೊಕ್ಕರು. ಶ್ರೀಯವರಿಗೆ ನಗರದಲ್ಲಿ ನಡೆಯುತ್ತಿರುವ ಸಿನಿಮಾಗಳ ಬಗ್ಗೆ ಫೋನ್ ಮೂಲಕ ವಿಚಾರಿಸಿಡಬೇಕೆಂದು ಹೇಳಿದರು.

ಮಹಡಿ ಮೆಟ್ಟಲುಗಳನ್ನು ಹತ್ತಿದೆ. ಅರ್ಧ ದಾರಿ ಹತ್ತಿದ ಮೇಲೆ ಮಹಡಿಯಿಂದ ಲಲಿತಳ ಗಂಟಲು ಕೋಪದಿಂದ ಧ್ವನಿಸಿತು. ಮುಂದಕ್ಕೆ

ನನ್ನ ಕಾಲುಗಳು ಕದಲಲಿಲ್ಲ. ಅಲ್ಲಿ ನಿಂತ ಹಾಗೆ ಆಲಿಸಿ ಕೇಳಿದೆ. ಲಲಿತಳ ಕೋಪದ ಸ್ವರಕ್ಕೆ ಬದಲಾಗಿ ಇನ್ನೊಂದು ಸ್ವರವೂ ಕೇಳಿಸಿತು. ಅದು ಸೇತುರಾಮನ ಸ್ವರ.

ಅವನು ಅವಳ ಹತ್ತಿರ ಮಾತನಾಡಿದ ಮಾತುಗಳು ! ಮಾತುಗಳೇ ಅವು ? ನಾನು ಅಲ್ಲಿ ನಿಲ್ಲ ಬಯಸಲಿಲ್ಲ. ಓಡೋಡಿ ಹಿಂದಕ್ಕೆ ಹೋಗಿ ಯಾರ ಕಣ್ಣಿಗೂ ಬೀಳದೆ ನನ್ನ ಕೊಠಡಿಯಲ್ಲಿ ಬಿದ್ದುಕೊಳ್ಳಬೇಕೆನಿಸಿತು. ಆದರೆ ಹಾಗೆ ಹಿಂದಿರುಗಿ ಬರುವಂಥಾ ಸಂದರ್ಭವೂ ಅಲ್ಲ ಅದು. ನಾನು ಅಲ್ಲಿ ನಿಂತಿರಲೇ ಬೇಕು. ಅವಶ್ಯವಾದರೆ ಆ ಸೇತುರಾಮನನ್ನು ಅಣು ಅಣುವಾಗಿ....

ನನ್ನ ಕೈಗಳು ನಡುಗಿದವು. ಮೈಯೆಲ್ಲವೂ ಕಂಪಿಸತೊಡಗಿತು. ಕೈಹಿಡಿಯ ಮರವನ್ನು ಬಿಗಿಯಾಗಿ ಹಿಡಿದುಕೊಂಡೆ. ಮೇಲಕ್ಕೂ ಹೋಗ ಲಿಲ್ಲ; ಕೆಳಕ್ಕೂ ಇಳಿಯಲಿಲ್ಲ.

"ಮಾವ! ನಿನ್ನನ್ನು ಮರ್ಯಾದೆಯಿಂದ ಕೇಳಿಕೊಳ್ಳುತ್ತೇನೆ. ಹೋಗು, ಹೊರಗೆ !"

"ಲಲಿತಾ !"

"ಹೋಗು !"

"ಹೋಗದಿದ್ದರೆ ? !"

"ಹೋಗೋ, ಹೊರಗೆ !"

"ಏನೂ ! ಹೋಗೋ ಎಂದೆಯ ?"

"ಅಹುದು."

"ನಾನೆಂದರೆ ನಿನಗೆ ಕಹಿ. ಆ ಸೋಮು ಎಂದರೆ....? ಅವನಿಗೇನು ! ಹೆಸರಾಂತ ಸಾಹಿತಿ...."

ಕೆನ್ನೆಯಲ್ಲಿ ಫಳೀರ್ ಎಂದು ಏಟು ಬೀಳುವ ಶಬ್ದವು ಕೇಳಿಸಿತು. ಅವನು ನಕ್ಕನು.

"ಇನ್ನೊಂದು ಕೆನ್ನೆಗೂ ಹಾಕು ಲಲಿತ!"

"ಪಶು!"

"ಸೋಮು ಮಾನವ; ನಾನು ಪಶು!"

"ಅಹುದು; ಹೋಗೋ ಹೊರಗೆ! ಅತ್ತೆಯನ್ನು ಕೂಗಲೇ?"

ಅವನು ಮತ್ತೆ ಉನ್ಮತ್ತನಂತೆ ನಕ್ಕನು.

"ಅತ್ತೆಯನ್ನೇ? ನಿನ್ನ ಅತ್ತೆಗೆ ಎಲ್ಲವೂ ಗೊತ್ತು. ಯಾರೋ ಒಬ್ಬ ಉಂಡಾಡಿಯೊಂದಿಗೆ ನೀನು ಸೇರಿ ತಿರುಗುವುದಕ್ಕಿಂತ ನನ್ನೊಂದಿಗೆ ಇರುವುದನ್ನು ನನ್ನ ಚಿಕ್ಕಮ್ಮ ತಡೆಯುವುದಿಲ್ಲ."

ಮಹಡಿ ಮೆಟ್ಟಲುಗಳು ತಲೆಕೆಳಗಾಗಿ ಸುತ್ತಿದವು. ಕೆಳಗೆ ಬಿದ್ದು ಹೋಗದಂತೆ ಕೈಹಿಡಿಯನ್ನು ಬಿಗಿಯಾಗಿ ಹಿಡಿದುಕೊಂಡೆ. ಚಿಕ್ಕಮ್ಮನ ಒಪ್ಪಿಗೆಯಿಂದಲೇ ಇವನು ಇಲ್ಲಿಗೆ ಬಂದಿರುವುದು? ಯಾವ ಹೆಣ್ಣಿನ ಮನಸ್ಸಾದರೂ ಇದನ್ನು ಕನಸಿನಲ್ಲಿ ಸಹಿಸಲು ಸಾಧ್ಯವೇ!

ಅದಕ್ಕೆ ಮೇಲೆ ಅಲ್ಲಿ ಮಾತಿನ ಶಬ್ದ ಕೇಳಿಸಲಿಲ್ಲ. ಯಾವುದನ್ನೋ ತೆಗೆದು ಅವಳು ಸೇತುವಿನ ಮೇಲೆ ಬೀಸಿದಳು. ಪಾತ್ರೆಗಳು ಉರುಳಿದವು. ಆ ಕೊಠಡಿಯಲ್ಲಿ ಮಾತ್ರ ಭೂಕಂಪವು ಆದಂತಿತ್ತು. ಮರುಕ್ಷಣ ಕೆನ್ನೆಯಲ್ಲಿ ಕೈಯಿಟ್ಟ ಹಾಗೇ ದಡದಡವೆಂದು ಕೆಳಗಿಳಿದು ಬಂದ ಸೇತು. ನನ್ನನ್ನು ಕಂಡತಕ್ಷಣ ಅವನ ಕಣ್ಣುಗಳು ಬೆಂಕಿಯನ್ನು ಕಾರಿತು.

"ಸಂಪಾದಕರೇ! ಬನ್ನಿ. ನಿಮ್ಮನ್ನು ನಿರೀಕ್ಷಿಸುತ್ತಿರುವ ಸಮಯದಲ್ಲಿ ನಾನು ಬಂದುಬಿಟ್ಟೆ—ಬೇಗನೆ ಹೋಗಿ. ಅವಳು ಒಬ್ಬಳೇ ಇದ್ದಾಳೆ"

—ಎಂದನು.

ನಾನು ಆ ಕಡೆಗೆ ತಿರುಗಿದಾಗ ಮಹಡಿಯ ಬಾಗಿಲ ಬಳಿ ಅವಳು ನಿಂತಿದ್ದಳು. ಅವಳ ಕೈಯಲ್ಲಿ ಬೆತ್ತವು ಕಂಪಿಸುತ್ತಿತ್ತು. ಕಾಳಿಯ ಹಾಗೆ ಅವಳು ಆವೇಶದಿಂದ ದಿಟ್ಟಿಸಿದಳು. ನನ್ನನ್ನು ಕಂಡ ನಂತರವೂ ಅವಳ ಕೋಪವು ಇಳಿಯಲಿಲ್ಲ. ಕೈಯಲ್ಲಿದ್ದ ಬೆತ್ತ ಮಾತ್ರ ಜಾರಿ ಕೆಳಗೆ ಬಿತ್ತು.

"ನೀವು ಎಲ್ಲಿಗೆ ಬಂದಿರಿ ?"

—ಗುಡುಗಿದಳು ಅವಳು.

ನಾನು ಏನೂ ಉತ್ತರಿಸಲಿಲ್ಲ.

"ಸೊಗಸಾದ ನಾಟಕವಿದು ! ಎಷ್ಟು ಸುಂದರವಾಗಿ ನಟಿಸುತ್ತೀಯ ! ಅವರೆಲ್ಲಿಗೆ ಬಂದಿರುತ್ತಾರೆ ? ನಿನಗೆ ತಿಳಿಯದೇ ಲಲಿತಾ ?"

—ಎಂದು ಪರಿಹಾಸ್ಯ ಮಾಡಿದನು ಸೇತು.

ಮಧ್ಯೆ ನಾನು ನಿಂತಿದ್ದೆ. ಒಂದು ಕಡೆ ಬೆಂಕಿಯಾಗಿ ಲಲಿತಳೂ, ಇನ್ನೊಂದು ಕಡೆ ಧೂಳು ತುಂಬಿದ ಬಿರುಗಾಳಿಯಂತೆ ಸೇತುರಾಮು ನಿಂತಿದ್ದ.

"ಅವರು ಮನೆಯಲ್ಲಿಲ್ಲ. ಹೋಗಿ ಆಮೇಲೆ ಬನ್ನಿ !"

—ಎಂದಳು ಲಲಿತ.

"ಅವರು ಇಲ್ಲದಿರುವುದರಿಂದ ತಾನೇ ಇವರು ಬಂದಿರುವುದು ?"

—ಎಂದ ಸೇತು.

ನನಗೇನೂ ಅರ್ಥವಾಗಲಿಲ್ಲ. ನನ್ನ ತಲೆ ಸುತ್ತಿತು. ನನ್ನನ್ನು ನೋಡಿಯೇ ಲಲಿತ ಹೀಗೆ ಹೇಳುತ್ತಾಳೆ ?

'ಅವರು ಮನೆಯಲ್ಲಿಲ್ಲ, ಹೋಗಿ ಬನ್ನಿ'

—ಎಂದು ಹೇಳುವುದು ನನ್ನನ್ನೇ ? ಮನೆಯನ್ನು ಬಿಟ್ಟು ಹೊರಗೆ ಹೋಗು ಎಂದು ಹೇಳುವುದು ಈ ಸೋಮುವನ್ನೇ ? ಅದೂ ಸೇತುರಾಮನ ಇದಿರಿನಲ್ಲೇ ? ನಾನು ನನ್ನನ್ನೇ ನಂಬಲಿಲ್ಲ. ಲಲಿತಳ ಮುಖವನ್ನು ಅಚ್ಚರಿಯಿಂದ ನೋಡಿದೆ.

"ಸೋಮು ! ನಿಮಗೇ ಹೇಳುತ್ತಿರುವುದು"

—ಎಂದಳು ಅವಳು.

ಮರುಕ್ಷಣ ಏನಾಯಿತೆಂಬುದು ನನಗೆ ತಿಳಿಯದು. ಹೇಗೆ ನನ್ನ ಕೊಠಡಿಗೆ ಬಂದು ಸೇರಿದೆನೆಂಬುದೂ ತಿಳಿಯಲಿಲ್ಲ. ಪ್ರತಿಯೊಬ್ಬ ಮನುಷ್ಯನಿಗೂ ಅವನಿಗರಿಯದ ಒಂದು ಶಕ್ತಿ ಇಂತಹ ಸಮಯಗಳಲ್ಲಿ ಮಾರ್ಗದರ್ಶನ

ಮಾಡಿ ಕಾಪಾಡುತ್ತದೆ. ಆ ಶಕ್ತಿಯೇ ನನ್ನನ್ನು ತಂದು ನನ್ನ ಕೊಠಡಿಯೊಳಕ್ಕೆ ಭದ್ರವಾಗಿ ತಳ್ಳಿರಬೇಕು.

ನಾನು ಆ ಸಂಜೆಯ ಹೊತ್ತಿನಲ್ಲಿ ನಿದ್ರಾವಸ್ಥೆಗೂ ಜಾಗ್ರತಾವಸ್ಥೆಗೂ ಮಧ್ಯೆ ಅನೇಕ ಕನಸುಗಳನ್ನು ಕಂಡೆ. ಕಗ್ಗಾಡಿನಲ್ಲಿ ಹುಲಿ ನನ್ನನ್ನು ಅಟ್ಟಿಸಿ ಬರುವ ಹಾಗೂ, ಮದರಾಸು ನಗರದ ಬೀದಿಯೊಂದರಲ್ಲಿ ನನ್ನ ಮೇಲೆ ಮೋಟಾರು ಹತ್ತಿ ಬಿಟ್ಟ ಹಾಗೂ, ಆಕಾಶದಲ್ಲಿ ನೆಲೆಯಿಲ್ಲದೆ ಹಾರಾಡುತ್ತ ಅಲೆಯುತ್ತಿರುವ ಹಾಗೂ ಆ ಕನಸುಗಳು ಇದ್ದವು.

ಮಾರನೆಯ ದಿನ ಬೆಳಗ್ಗೆ ಬಹಳ ಹೊತ್ತಿನವರೆಗೆ ಹಾಸಿಗೆಯನ್ನು ಬಿಟ್ಟು ಏಳಲಿಲ್ಲ. ಮೈಯೆಲ್ಲವೂ ಥಳಿಸಿದ ಹಾಗೆ ನೋಯಿತು. ತಲೆ ನೋವೂ ಅಸಾಧ್ಯವಾಗಿತ್ತು. ಎಂಟು ಗಂಟೆಯಾದ ನಂತರ ಜಾನಕಿರಾಮ ನನ್ನ ಕಾಫಿ ತರಲು ಕಳುಹಿಸಿ ಬಿಟ್ಟು ಹಾಸಿಗೆಯಲ್ಲೇ ಬಿದ್ದುಕೊಂಡಿದ್ದೆ. ಅವತ್ತೆಲ್ಲಾ ಹಾಗೇ ಮಲಗಿರಬೇಕೆನಿಸಿತು.

ಸ್ವಾಮಿನಾಥ ಈಗ ನನ್ನ ಕೊಠಡಿಯಲ್ಲಿರುವುದಿಲ್ಲ. ಮುದ್ರಣಾಲಯಕ್ಕೆ ಪಕ್ಕದಲ್ಲಿದ್ದ ಒಂದು ಪ್ರತ್ಯೇಕ ಕೊಠಡಿಗೆ ಹೋಗಿಬಿಟ್ಟನು. ಪದೇ ಪದೇ ಅವನು ಮೊದಲಿನ ಹಾಗೆ ನನ್ನನ್ನು ಸಂಧಿಸುವುದಿಲ್ಲ. ಈ ಸಮಯದಲ್ಲಿ ಮಾತ್ರ ಅವನನ್ನು ಕುರಿತು ನೆನಸಿಕೊಳ್ಳುತ್ತಿದ್ದಾಗಲೇ ಅವನು ಬಂದು ಬಿಟ್ಟ.

"ಇನ್ನೂ ಎದ್ದಿಲ್ಲವೇ? ಏನು ಮೈಗೆ?"

—ಎಂದ.

"ಏನೂ ಇಲ್ಲ"

—ಎಂದೆ ಮೈಮುರಿಯುತ್ತಾ.

"ಏನೋ ಒಂದು ತರಹ ಇದ್ದೀಯ!"

—ಎಂದ ಹಣೆಯಲ್ಲಿ ಕೈಯಿಟ್ಟು ನೋಡಿ.

"ನಿನಗೆ ಮೈಯೂ ಸರಿಯಿಲ್ಲ; ಮನಸ್ಸೂ ಸರಿಯಿಲ್ಲ"

—ಎಂದ.

ನಾನು ನಗಲು ಪ್ರಯತ್ನಿಸಿದೆ.

"ಸೋಮು!"

"ಏನು?"

"ನನ್ನ ಮಾತಿಗೆ ಸ್ವಲ್ಪ ಬೆಲೆ ಕೊಡು. ಬೇಗ ಮದುವೆಯಾಗು. ನಾನೂ ಕಾಂತಳೂ ಅದಕ್ಕೆ ವ್ಯವಸ್ಥೆ ಮಾಡುತ್ತೇವೆ."

"ನಿಮ್ಮ ಮದುವೆ ಮೊದಲು ನಡೆಯಲಿ."

"ಅದು ನಿಶ್ಚಯವಾಗಿ ಹೋಯಿತಲ್ಲ! ಅದರೊಳಗೆ ನಿನ್ನ ಮದುವೆಯೂ ಮುಗಿಯಬೇಕೆಂದು ಬಯಸುತ್ತೇನೆ. ನಾನು ಮಾತ್ರವಲ್ಲ; ಕಾಂತಳ ತಂದೆಯವರೂ ನಿನ್ನ ಬಗ್ಗೆ ಅಕ್ಕರೆಗೊಂಡಿದ್ದಾರೆ."

"ಎಲ್ಲರಿಗೂ ನಾನು ಕೃತಜ್ಞ. ನಾನು ಇಷ್ಟರಲ್ಲೇ ಮದುವೆಯಾಗುವುದಿಲ್ಲ. ನಾನು ಹೀಗಿರುವುದರಿಂದ ಯಾರಿಗೇನು ಕಷ್ಟ ಬಂತು?"

"ಯಾರಿಗೋ ಕಷ್ಟ ಬರಬಹುದೆಂದೇ ಹೇಳುತ್ತಿರುವುದು."

"ದಯವಿಟ್ಟು ಇನ್ನು ಇದರಲ್ಲಿ ನೀನು ತಲೆಯಿಡಬೇಡ!"

"ನಿನ್ನನ್ನು ಒಳ್ಳೆಯವನೆಂದು ತಿಳಿದಿದ್ದೆ. ನೀನು ಅಯೋಗ್ಯ! ದ್ರೋಹಿ! ವಂಚಕ!"

"ಹಾಗೇ ಇರಲಿ; ನಿನ್ನ ಬಾಯಿಂದಲೇ ಅದನ್ನು ಕೇಳಿದ್ದಕ್ಕೆ ನನಗೆ ಬಹಳ ಸಂತೋಷ."

"ನಿನ್ನ ಬಗ್ಗೆ ಊರೆಲ್ಲಾ ನಗುತ್ತಿದೆ ಸೋಮು. ನನ್ನಿಂದ ಕಿವಿ ಕೊಟ್ಟು ಕೇಳಲಾಗುತ್ತಿಲ್ಲ. ಹೀಗೆಯೇ ಹೋಗುತ್ತಿದ್ದರೆ ಈ ನಾಡಿಗೆ ನಾಡೇ ನಗುತ್ತದೆ ನೋಡು!"

"ನಗಲಿ."

"ನೀನು ಅನ್ಯರ ಜೀವನದಲ್ಲಿ ತಲೆಹಾಕುತ್ತೀಯ! ಗೌರವದಿಂದ ಬಾಳುತ್ತಿರುವ ಒಂದು ಕುಟುಂಬವನ್ನೇ ನೆಲಸಮ ಮಾಡುತ್ತೀಯ. ನಿನ್ನ ಹೆಸರು ಕೆಡುವುದಿರಲಿ, ಒಂದು ಸಂಭಾವಿತರ ಹೆಸರು, ಒಂದು ಎಳೆಯ

ತರುಣಿಯ ಮಾನ....ಸೋಮು ನೀನು ಮನುಷ್ಯನೇ? ಮನುಷ್ಯತ್ವವನ್ನೇ ನೀನು ಮರೆತುಬಿಟ್ಟೆಯಾ?"

ನಾನು ಬೇರೆ ಕಡೆಗೆ ಹೊರಳಿ ಮಲಗಿದೆ. ನಿನ್ನೆ ಹೃದಯಕ್ಕೆ ಬಿದ್ದ ಪೆಟ್ಟು ಸಾಲದೆಂದು, ಇಲ್ಲಿ ಇವನು ಅದನ್ನು ಚೂಪಾದ ಸೂಜಿಯಿಂದ ತಿವಿಯುತ್ತಿದ್ದನು.

"ಇಷ್ಟು ದಿನಗಳೂ ಕಷ್ಟಪಟ್ಟು ಗಳಿಸಿದ ಹೆಸರು ಹೀಗೆ ಕೆಟ್ಟು ಹೋಗ್ತಿದೆಯಲ್ಲ ಸೋಮು! ಭವಿಷ್ಯತ್ತನ್ನು ಕುರಿತು ನೀನು ಆಲೋಚಿಸುವುದಿಲ್ಲವೇ? ಪ್ರಪಾತಕ್ಕೆ ನೀನು ಬೀಳುತ್ತಿದ್ದೀಯ. ಮನುಷ್ಯರು ನಿನ್ನನ್ನು ತಿರಸ್ಕರಿಸಿ ದೂರಹಾಕುವ ದಾರಿಯಲ್ಲಿ ನೀನು ಹೋಗುತ್ತಿದ್ದೀಯ."

"ನೀನು ಕೂಡ ನನ್ನನ್ನು ಸಂದೇಹಿಸುವುದು ವಿಚಿತ್ರವೇ!"

—ಎಂದೆ.

"ರಾಮಕೃಷ್ಣರ ನುಡಿ ಸಮಂಜಸವಾಗೇ ಇದೆ—'ಎಷ್ಟು ಮೇಲೆ ಹಾರಿದರೂ ಹದ್ದು ಕೆಳಗೆ ಕುಪ್ಪೆಯಲ್ಲಿ ಬಿದ್ದಿರುವ ಸತ್ತ ಇಲಿಯನ್ನೇ ಹುಡುಕುವುದಂತೆ.'"

—ಎಂದು ಹೇಳಿಬಿಟ್ಟು ಅವನು ಹೊರಟುಹೋದ.

ಅವನು ಹೊರಟುಹೋದುದು ನನಗೆ ಸ್ವಲ್ಪ ಸಮಾಧಾನಕರವಾಗಿತ್ತು. ಕೋಪಗೊಂಡು ಹೋದ್ದರಿಂದ ಬೇಗನೇ ಹಿಂದಿರುಗಲಾರನೆಂದುಕೊಂಡೆ. ಆದರೆ ಅರ್ಧ ಗಂಟೆಯೊಳಗೆಲ್ಲಾ ಮತ್ತೆ ಅಲ್ಲಿಗೆ ಬಂದುಬಿಟ್ಟ. ಅವನೊಂದಿಗೆ ಇನ್ನೂ ಮೂವರು ಅವಸರದಿಂದ ಒಳನುಗ್ಗಿದರು. ಕಾಂತಳು, ಅವಳ ತಂದೆ ಮತ್ತು ಅವರ ಮನೆಯ ಡಾಕ್ಟರ್.

"ನಿಮಗೇನು ಮೈಗೆ?"

—ಎಂದರು ಡಾಕ್ಟರ್.

"ಏನೂ ಇಲ್ಲವಲ್ಲಾ!"

—ಎಂದೆ.

ಸ್ವಾಮಿನಾಥ ಕಣ್ಣುಗಳಿಂದ ನನ್ನನ್ನು ಖಂಡಿಸಿದ.

ಡಾಕ್ಟರು ನನ್ನ ಅಂಗಿಯನ್ನು ತೆಗೆಯುವಂತೆ ಹೇಳಿದರು; ನಾಲಿಗೆಯನ್ನು ಹೊರಗೆ ಚಾಚಬೇಕೆಂದರು; ಕಣ್ಣುಗಳನ್ನು ಬಿಡಿಸಿ ನೋಡಿದರು. ನನ್ನನ್ನು ತೀವ್ರವಾಗಿ ಪರೀಕ್ಷಿಸಿದರು.

'ನಿಮಗೆ ತಲೆಸುತ್ತುವ ಹಾಗಿರುತ್ತದಲ್ಲವೆ? ನಾಲಗೆ ಕಹಿಯಾಗಿರುತ್ತೆ ! ವಾಕರಿಕೆ ಆಗುವ ಹಾಗೆ ಇರುತ್ತದೆ !'

—ಮುಂತಾಗಿ ಹೇಳುತ್ತಾ ಹೋದರು.

ಅವರು ಹೇಳುವ ಯಾವ ರೀತಿಯೂ ನನಗೆ ಇಲ್ಲ. ಆದರೂ ಬಾಯಿಬಿಚ್ಚದೆ ಸುಮ್ಮನಿದ್ದೆ. 'ಇಲ್ಲ'ವೆಂದು ಹೇಳಲಿಲ್ಲ. ಅವರೋ ರಾಮಲಿಂಗಂರವರ ಮನೆಯ ಡಾಕ್ಟರ್. ರಾಮಲಿಂಗಂರವರಾದರೋ ಪಕ್ಕದಲ್ಲೇ ನಿಂತಿದ್ದಾರೆ. ನಿಜವನ್ನು ಹೇಗೆ ಹೇಳುವುದು ?

"ಮೆದುಳಿಗೆ ಬಹಳ ಕೆಲಸ ಕೊಟ್ಟಿದ್ದೀರಿ. ಸ್ವಲ್ಪ ವಿಶ್ರಾಂತಿಬೇಕು. ಎರಡು ದಿನಗಳಲ್ಲಿ ಸರಿಹೋಗುತ್ತೆ. ಔಷಧ ಕಳುಹಿಸುತ್ತೇನೆ. ಗಂಜಿಯೂ, ಕಿತ್ತಲೆಹಣ್ಣೂ ತೆಗೆದುಕೊಳ್ಳಿ"

—ಎಂದರು.

ಕತೆಗಾರನಿಗೂ ಮೆದುಳಿನ ಅವ್ಯವಸ್ಥೆಗೂ ಇರುವ ಸಂಬಂಧವನ್ನು ಮಾತ್ರ ಆ ಡಾಕ್ಟರು ಸರಿಯಾಗಿ ಅರಿತುಕೊಂಡಿದ್ದರು. ನಿಜವಾಗಿಯೂ ಆ ರೀತಿ ಎಲ್ಲಿ ಆಗಿಬಿಡುವುದೋ ಎಂದು ಹೆದರಿದ್ದೆ. ಎಲ್ಲರೂ ಹೊರಟರು. ನಾನು ಬರೆಯುತ್ತಿದ್ದ ಕಾದಂಬರಿ ಮುಂದೆ ಬಿದ್ದಿತ್ತು. ಜಾನಕಿರಾಮನನ್ನು ಹೋಟಲಿಗೆ ಕಳುಹಿಸಿ, ಇಡ್ಲಿ, ಕಾಫಿ ತರಿಸಿ ತಿಂದೆ. ಡಾಕ್ಟರ್ ಕಳುಹಿಸಿದ ಔಷಧಿ, ಕಾಂತಳ ಮನೆಯ ಗಂಜಿಯನ್ನು ಹೊರಗೆ ಚೆಲ್ಲುವಂತೆ ಹೇಳಿದೆ. ಬೀದಿ ಬಾಗಿಲ ಬಳಿ ಜಾನಕಿರಾಮನನ್ನು ಕೂರಿಸಿಬಿಟ್ಟು ಕಾದಂಬರಿಯನ್ನು ಬರೆಯತೊಡಗಿದೆ.

ಆ ಕಾದಂಬರಿಯನ್ನು ಮುಟ್ಟಿದಾಕ್ಷಣ ನನ್ನ ಮನಸ್ಸಿನ ಬಾಧೆ, ಹೃದಯದ ಭಾರ, ಚಿಂತನೆಗಳ ತಿವಿತ ಎಲ್ಲವೂ ಎಲ್ಲಿಗೋ ಮಾಯವಾದವು.

ನನ್ನನ್ನೇ ಮರೆತೆ. ಹೊಸ ವ್ಯಕ್ತಿಯಾಗಿ ಮಾರ್ಪಟ್ಟು ನಾನು ಅಡ್ಡಿ ಆತಂಕ ಗಳಿಲ್ಲದೆ ಅತಿವೇಗದಲ್ಲಿ ಬರೆದುಕೊಂಡು ಹೋದೆ. ಹೊಸ ಕಲ್ಪನೆಗೋ, ಭಾವನೆಗೋ ಆ ಕಾದಂಬರಿಯಲ್ಲಿ ಏನೂ ಸ್ಥಳವಿರಲಿಲ್ಲ. ಎಲ್ಲವೂ ಕೆಲವು ತಿಂಗಳಿಂದ ನನ್ನೆದುರಿನಲ್ಲಿ ನಡೆದ ಸಂಭವಗಳೇ.

ಸಾಯಂಕಾಲ ಡಾಕ್ಟರು ಬಂದರು. ಅವರಿಗೆ ನನ್ನ ಬಗ್ಗೆ ಸ್ವಾಮಿನಾಥನು ಪ್ರತ್ಯೇಕವಾಗಿ ಹೇಳಿದ್ದನೆಂದು ಕಾಣುತ್ತದೆ. ಅವರು ಮೆತ್ತಗೆ ನನ್ನ ಕ್ಷೇಮಲಾಭಗಳನ್ನು ವಿಚಾರಿಸುವಂತೆ ಮೊದಲು ಮಾಡಿ ಕಡೆಗೆ ನನ್ನ ಮದುವೆಯ ಹಂತಕ್ಕೆ ಬಂದುನಿಂತರು.

"ಬೇಗನೆ ಮದುವೆ ಮಾಡಿಕೊಳ್ಳಿ. ಅದರ ನಂತರವೇ ಒಂದು ಹೆಣ್ಣಿನ ಒಡನಾಟವು ಗಂಡಸಿಗೆ ಎಷ್ಟು ಅವಶ್ಯವೆಂಬುದು ನೀವು ಅರಿತುಕೊಳ್ಳುವಿರಿ"

—ಎಂದರು.

"ಹೆಣ್ಣಿನ ಸಖ್ಯದಿಂದಾಗಿ ಗಂಡು ಅನುಭವಿಸಬೇಕಾದ ಅವಸ್ಥೆಯೂ ಆಮೇಲೇ ಗೊತ್ತಾಗುವುದು"

—ಎಂದೆ ನಾನು.

"ಕಷ್ಟವಿಲ್ಲದೆ ಸುಖವು ಸಿಗುವುದಿಲ್ಲ, ಸಾರ್; ಬೇಗನೆ ನನಗೆ ಔತಣದ ಊಟ ಹಾಕಿಸಿ"

—ಎಂದರು ಅವರು.

ಮೂರು ದಿನಗಳಾಯಿತು. ಕಾದಂಬರಿಯ ಅರ್ಧ ಭಾಗ ಮುಗಿಯಿತು. ನಾಲ್ಕನೆಯ ದಿನ ನನ್ನ ಬಳಿಗೆ ನಾರಾಯಣಸ್ವಾಮಿಯ ಡ್ರೈವರ್ ಬಂದ.

"ನಿಮ್ಮನ್ನು ಯಜಮಾನರು ಕರೆತರಲು ಹೇಳಿದರು"
—ಎಂದ.

ನಾನು ನಿರೀಕ್ಷಿಸಿದ ಆಹ್ವಾನ ಇಷ್ಟು ದಿನಗಳು ಬಿಟ್ಟು ಬಂದಿದ್ದು ನನಗೆ ಆಶ್ಚರ್ಯವಾಗಿತ್ತು. ನಾರಾಯಣಸ್ವಾಮಿಯೇ ಬರಬಹುದು ಎಂದಿದ್ದೆ.

"ಯಜಮಾನರೇ ಕರೆತರಲು ಹೇಳಿದರೆ?"

"ಯಜಮಾನರು ಹೇಳಿದರೆಂದು ಅಮ್ಮಾ ಅವರು ಹೇಳಿದರು."

"ಕೆಲಸ ಹೆಚ್ಚಾಗಿದೆ; ಬಿಡುವಿಲ್ಲ. ಇನ್ನೊಂದು ದಿನ ಬರುತ್ತೇನೆಂದು ಹೇಳು."

"ತಕ್ಷಣ ಹಿಂದಿರುಗಿಬಿಡಬಹುದೆಂದರು."

"ಈಗ ಪುರಸತ್ತಿಲ್ಲ"

—ಎಂದೆ.

ಅವನು ಹೋಗಿಬಿಟ್ಟ.

ಮಾರನೆ ದಿನ ಅಂಚೆಯಲ್ಲಿ ಲಲಿತಳ ಕಾಗದ ಬಂತು. ಅವಳು ನನಗೆ ಬರೆಯುತ್ತಿರುವ ಪ್ರಥಮ ಪತ್ರ:

"ಪ್ರೀತಿಯ ಸೋಮು ಅವರಿಗೆ,

ವಂದನೆಗಳು.

ಅವರಿಗೆ ಆರೋಗ್ಯ ಸರಿಯಿಲ್ಲ. ನಿಮ್ಮನ್ನು ನೋಡಬೇಕೆಂದು ಬಹಳ ಕಾತರರಾಗಿದ್ದಾರೆ. ದಯವಿಟ್ಟು ಇವತ್ತು ಬಂದು ಹೋಗಿ. ನಾನೂ ನಿಮ್ಮ ಬಳಿ ಖುದ್ದಾಗಿ ಮಾತನಾಡುವುದಿದೆ."

**ಲಲಿತ.**

ಕಾಗದವನ್ನು ನಾನು ಹಲವು ಬಾರಿ ಓದಿದೆ. ಅದರಲ್ಲಿದ್ದ ಮೊದಲ ವಾಕ್ಯವು ನನಗೆ ಹೆಚ್ಚು ಹಿಂಸೆಯನ್ನು ಕೊಟ್ಟಿತು. ನಾರಾಯಣಸ್ವಾಮಿ ಆರೋಗ್ಯದಿಂದಿದ್ದರೆ ಖಂಡಿತ ಇಲ್ಲಿಗೆ ಬರದೆ ಸಿಲ್ಲುತ್ತಿರಲಿಲ್ಲ. ಹಟಾತ್ತಾಗಿ ಅವರಿಗೆ ಆ ರೀತಿಯಾಗಲು ಕಾರಣ, ಅಂದು ಅವರ ಮನೆಯಲ್ಲಿ ನಡೆದ ಸಂಭವಕ್ಕೆ ಅನುಸರಿಸಿದುದಾಗೇ ಇರಬೇಕು.

ಕಾಗದದ ಕೊನೆಯ ವಾಕ್ಯವೂ ನನ್ನನ್ನು ಹೆಚ್ಚು ಚಿಂತಾಮಗ್ನನನ್ನಾಗಿ ಮಾಡಿತು.

'ನಾನೂ ನಿಮ್ಮ ಬಳಿ ಖುದ್ದಾಗಿ ಮಾತನಾಡುವುದಿದೆ'

—ಅವಳೆಷ್ಟು ಎದೆಗಾರಿಕೆಯಿಂದ ಇದನ್ನು ನನಗೇ ಬರೆದಿದ್ದಾಳೆ? ನನ್ನ ಬಳಿ ಮಾತನಾಡಬೇಕಂತೆ! ಇನ್ನು ನನ್ನ ಬಳಿ ಅವಳು ಮಾತನಾಡುವುದಕ್ಕೆ ಏನಿದೆ? ಯಾವ ಮುಖದಿಂದ ನನ್ನನ್ನು ನೋಡಿ ಮಾತನಾಡುತ್ತಾಳೆ? ಅವಳ ಸಾಹಸದ ಬಿರುಗಾಳಿಗೆ ಸಿಕ್ಕ ತರಗೆಲೆಯೆಂದು ನನ್ನನ್ನು ಭಾವಿಸುತ್ತಾಳೆಯೆ?

ಪುಷ್ಪಗುಚ್ಛಗಳು ತಂಗಾಳಿಯ ಜೊತೆಯಿಂದ ಕೂಡಿ ನಗುತ್ತಿರುವಾಗ ಅದನ್ನು ನೋಡಿ ಆನಂದಿಸುವ ಹಾಗೆ, ಸುಂದರ ತರುಣಿಯರ ಲಘು ಸಾಹಸಗಳನ್ನು ಕಂಡು ನಾನು ಆನಂದಿಸಿರುತ್ತಿದ್ದೆ. ಆದರೆ ಆ ಸಾಹಸದ ಅಡಿವಾರದಲ್ಲಿ ಪ್ರೀತಿಯಿಲ್ಲದೆ ಹೋದಾಗ ವಂಚನೆಗೂ ಮೋಸಕ್ಕೂ ಆ ಸಾಹಸವು ಆಯುಧವಾಗುವಾಗ ಅದನ್ನು ಸಹಿಸಲು ಯಾರಿಂದ ತಾನೆ ಸಾಧ್ಯ? ಪ್ರೀತಿಯನ್ನೇ ಲೆಕ್ಕಿಸದೆ, ಬುದ್ಧಿಶಕ್ತಿಯಿಂದ ಮಾತ್ರ ಬಾಳಲಾಶಿಸುವ ಹೃದಯಶೂನ್ಯ ಮಾನವರಿಗೂ, ಸತ್ಯಾಂಶವು ಲವಲೇಶವೂ ಇಲ್ಲದೆ ಸಾಹಸಕೃತ್ಯಗಳಿಂದಲೇ ಮನುಷ್ಯರನ್ನು ಮರುಳುಗೊಳಿಸುವ ಮೋಹಿನಿಗಳಿಗೂ ಯಾವ ಬಗೆಯಾದ ಭೇದವೂ ಇಲ್ಲ. ಗಾಯಗೊಂಡ ನನ್ನ ಹೃದಯವು ಅವಳ ವಿಚಿತ್ರ ವರ್ತನೆಯಿಂದ ಹೀಗೆಲ್ಲಾ ಭಾವಿಸಿ ಭಂಗಪಟ್ಟಿತು.

ನಾರಾಯಣಸ್ವಾಮಿಯವರನ್ನು ಹೋಗಿ ಈ ಸ್ಥಿತಿಯಲ್ಲಿ ನಾನು ನೋಡದಿದ್ದರೆ ಅದು ಮನುಷ್ಯತ್ವವಲ್ಲ. ಅವರನ್ನು ನಾನು ಚೆನ್ನಾಗಿ ಬಲ್ಲೆ; ಯೋಗ್ಯರು, ಉತ್ತಮರು, ಒಳ್ಳೆಯವರು. ಮನುಷ್ಯನಾದವನು ಮಾಡಬಹುದಂಥಾ ಕನಿಷ್ಠ ಪಕ್ಷದ ತಪ್ಪುಗಳನ್ನೇ ಅವರು ಮಾಡಿರಲು ಸಾಧ್ಯ. ತಪ್ಪುಗಳನ್ನೇ ಮಾಡದ ಮನುಷ್ಯನು ಈ ಜಗತ್ತಿನಲ್ಲಿ ಇದುವರೆಗೆ ಯಾರೂ ಇಲ್ಲ!

ನಾನು ಅಲ್ಲಿಗೆ ಹೋಗಿರುತ್ತಿದ್ದೆ, ಅಲ್ಲಿ ಅವಳನ್ನು ನೋಡದೆ ಇರಲು ಸಾಧ್ಯವಾಗಿದ್ದರೆ.

ನನ್ನ ಮನಸ್ಸು ಹೇಳಿತು:

'ನೀನೇನೂ ಡಾಕ್ಟರಲ್ಲ. ಒಳ್ಳೆಯ ಡಾಕ್ಟರುಗಳಿಂದ ಅವರು ತಮ್ಮನ್ನು ತಾವು ಗುಣಪಡಿಸಿಕೊಳ್ಳಬಹುದು. ನೀನು ಹೋಗಿ ನೋಡುವುದರಿಂದ ಅವರಿಗೆ ಯಾವ ರೀತಿಯ ಪ್ರಯೋಜನವೂ ಆಗುವುದಿಲ್ಲ. ನೀನು ಹೋಗುವ ಹಾಗಿದ್ದರೆ....ಹೋಗುವ ಹಾಗಿದ್ದರೆ....ಅದು ಅವಳಿಗಾಗಿ ಹೋದ ಹಾಗೆ ಅರ್ಥ! ಇಷ್ಟು ದಿನಗಳಿಂದ ನೀನು ನಿನ್ನನ್ನೇ ವಂಚಿಸಿಕೊಳ್ಳುತ್ತಾ ಬಂದಿದ್ದೀಯ. ಅವಳಿಗಾಗಿಯೇ ನೀನು ಅಲ್ಲಿಗೆ ಹೋಗಿದ್ದು! ಇನ್ನಾದರೂ ನಿನ್ನನ್ನು ವಂಚಿಸಿಕೊಳ್ಳಬೇಡ! ಆತ್ಮವಂಚನೆ ಮಹಾ ಘೋರವಾದುದು!'

ಪತ್ರವನ್ನು ಹಿಸುಕಿ ಗೂಡೆಗೆ ಹಾಕಿದೆ. ಬಾಗಿಲನ್ನು ಬಡಿಯುವ ಶಬ್ದ ಕೇಳಿಸಿತು. ಸಹಸಂಪಾದಕ ಶಂಕರನ್‌ರವರು ಒಳಗೆ ನುಗ್ಗಿದರು. ಪತ್ರಿಕೆಯ ಬಗ್ಗೆ ಮಾತನಾಡಿದೆವು. ಶಂಕರನ್ ಅವರದು ಮೃದುಸ್ವಭಾವ. ಯಾವಾಗಲೂ ನಗುಮುಖದಿಂದ ಸೌಮ್ಯವಾಗಿ ಮಾತನಾಡುತ್ತಿದ್ದರು. ಅವರ ಮಾತಿನಲ್ಲಿ ನನಗೆ ಮನಶ್ಶಾಂತಿ ಲಭಿಸಿತು.

ಅಂದು ಸಂಜೆ, ಎಂದೂ ಇಲ್ಲದ ವಿಚಿತ್ರ ಬಯಕೆಯೊಂದು ನನ್ನಲ್ಲಿ ಕಾಣಿಸಿಕೊಂಡಿತು. ಯಾವುದಾದರೂ ಒಂದು ಹೆಣ್ಣನ್ನು ಬಹು ಬೇಗ ಮದುವೆಯಾದರೆ ವಾಸಿಯೆನಿಸಿತು. ಕೆಲವರು ಹೇಳುವ ಹಾಗೆ ಮದುವೆಯೆಂಬುದು ಒಂದು ಜೂಜಾಟ. ಬಹುಶಃ ಒಂದೇ ಒಂದು ಬಾರಿ ಆಡಬೇಕಾದ ಆಟ. ಸೋಲೋ ಗೆಲುವೋ ಬೇರೆ ದಾರಿಯಿಲ್ಲದೆ ಅದನ್ನು ಅಂಗೀಕರಿಸಲೇಬೇಕು. ಯಾವುದಾದರು ಒಂದು ಹೆಣ್ಣು ಅವಳು ಕುರೂಪಿಯೋ, ಅವಿದ್ಯಾವತಿಯೋ, ನಾಗರಿಕತೆಯ ಗಂಧವನ್ನೇ ಅರಿಯದ ಮೂಢಳೋ, ಹೇಗಿದ್ದರೂ ಅವಳು ಹೆಣ್ಣೆಂಬುದಕ್ಕಾಗಿ ಮಾತ್ರ ಮದುವೆಯಾದರೆ ಸಾಕು ಎನಿಸಿತು. ಹೆಚ್ಚು ಓದಿದವಳು ಬೇಡ; ನನ್ನ ಕತೆಗಳನ್ನು ಓದಿ ಮೆಚ್ಚುವಂಥಾ ರಸಿಕಳು ಬೇಡ. ಅವಳು ಈ ಸಾಹಸಿ ಲಲಿತಳಂತೆಯೇ ಇರುತ್ತಾಳೆ!

ಬಹುದಿನಗಳ ಹಿಂದೆ ಹೋಗಿ ಬಂದ ಆ ಕಾವೇರೀ ತೀರಕ್ಕೆ ಇಂದು ಸೈಕಲಿನಲ್ಲಿ ಹೊರಟೆ. ಮರಳಿನಲ್ಲಿ ಉತ್ತರೀಯನ್ನು ಹಾಸಿ ಮಲಗಿದಾಗ

ಪದರಪದರವಾಗಿ ಘಟನೆಗಳು ಮನಸ್ಸಿನಲ್ಲಿ ಮೂಡಿಬಂದವು. ಲಲಿತ ಒಂದು ಸಾರಿ ನನ್ನನ್ನು ಕೇಳಿದ್ದಳು :

"ನಿಮ್ಮ ಕತೆಗಳನ್ನು ಓದಿದಾಗ ಟಾಗೂರರಂತೆ ನೀವು ವಯೋವೃದ್ಧರಾಗಿರಬಹುದೆಂದು ಭಾವಿಸಿದ್ದೆ."

"ನನ್ನ ಪ್ರೇಮಕತೆಗಳನ್ನು ಓದಿದ ನಂತರವೂ ನೀವು ಹಾಗೆ ಭಾವಿಸಿದಿರೆ?"

"ಅಹುದು; ಈ ಕಾಲದಲ್ಲಿ ಹೆಚ್ಚು ವಯಸ್ಸಾದವರಿಗೆ ತಾನೇ ಪ್ರೇಮದ ಮಹತ್ವ ತಿಳಿಯುತ್ತದೆ?"

—ಎಂದಳು.

ತಕ್ಷಣ ಅವಳು ಇದನ್ನು ಬಾಯಿತಪ್ಪಿ ಹೇಳಿದವಳಂತೆ ತುಟಿಯನ್ನು ಕಚ್ಚಿಕೊಂಡಳು. ನಾನು ಅರ್ಥಮಾಡಿಕೊಂಡೆ. ವಯಸ್ಸಾದ ನಾರಾಯಣ ಸ್ವಾಮಿ ಪ್ರೇಮದ ಮಹತ್ವವನ್ನು ಹೆಚ್ಚಾಗೇ ತಿಳಿದುಕೊಂಡಿದ್ದಾರೆ.

ಹೆಣ್ಣನ್ನು ನಾನು ಅರಿಯಲಾರದ ಸಮಸ್ಯೆಯೆಂದು ಎಲ್ಲೋ ಒಂದು ಕಡೆ ಹೇಳಿದ್ದೇನೆ. ಆದರೆ ಈ ಲಲಿತಳಿದ್ದಾಳಲ್ಲ ಇವಳು ಸಮಸ್ಯೆಯೊಳಗಿನ ಸಮಸ್ಯೆಯಾಗಿ ಕಂಡಳು.

ಕಾವೇರೀ ತೀರದಿಂದ ತಿರುಗಿ ಬಂದು, ಕೊಠಡಿಯ ಬಾಗಿಲನ್ನು ತೆರೆದು ದೀಪ ಹಾಕಿದೆ.

"ನಿಮ್ಮನ್ನು ಆ ಅಮ್ಮ ಬಂದು ಹುಡುಕಿದರು"

—ಎಂದ ಜಾನಕಿರಾಮು.

"ಯಾವ ಅಮ್ಮ?"

"ಲಲಿತಮ್ಮನವರು."

"ಬೇರೆ ಏನು ಹೇಳಿದರು?"

"ನಾಳೆ ಬೆಳಗ್ಗೆ ಬಂದು ನೋಡುವುದಾಗಿ ಹೇಳಿದರು"

—ಎಂದ ಜಾನಕಿರಾಮು.

ಅಂದು ರಾತ್ರಿ ನನಗೆ ನಿದ್ದೆ ಹತ್ತಲೇ ಇಲ್ಲ.

# ೧೨

ನಿದ್ದೆ ಬಾರದ ರಾತ್ರಿಯು ಮನುಷ್ಯನಿಗೆ ಎಷ್ಟು ಬಗೆಯಾದ ಸಂಕಟ ಗಳನ್ನು ಕೊಡಬಹುದು ಎಂಬುದನ್ನು ನಾನು ಅವತ್ತೇ ಅರಿತುಕೊಂಡೆ. ಮಾರನೆಯ ದಿನ ಬೆಳಗಾದ ತಕ್ಷಣ ಅಲ್ಲಿ ನಿಲ್ಲದೆ ಎಲ್ಲಾದರೂ ಹೊರಗೆ ಹೋಗಿ ಬಿಟ್ಟರೇ ಲೇಸು ಎನಿಸಿತು. ಲಲಿತಳನ್ನು ಸಂಧಿಸಲು ನಾನು ಬಯಸ ಲಿಲ್ಲ. ಅವಳನ್ನು ಸುಮ್ಮನೆ ಇಲ್ಲಿಗೆ ಹಲವು ಬಾರಿ ನಡೆಸಿ, ಅಲೆಯುವಂತೆ ಮಾಡಿ, ನನ್ನ ತಿರಸ್ಕಾರವನ್ನು ತೋರಿಸಿಕೊಂಡರೂ ಅದೇನು ಪಾಪವಲ್ಲ ವೆನಿಸಿತು. ಆದರೆ, ಭಾವನೆಗಳು ತಮ್ಮೊಳಗೇ ಹೋರಾಡಿ ಬಳಲಿಬಿದ್ದ ನಂತರ ನಾನು ಒಂದು ತೀರ್ಮಾನಕ್ಕೆ ಬಂದೆ. ನಾಳೆ ಅವಳನ್ನು ಸಂಧಿಸಲೇ ಬೇಕು; ಹೆಣ್ಣೆಂದೂ ನೋಡದೆ, ಅವಳೊಡನೆ ಸ್ನೇಹದಿಂದ ಕಳೆದಿದ್ದ ದಿನ ಗಳನ್ನೂ ಮರೆತು, ಪ್ರೀತಿಯನ್ನೆಲ್ಲಾ ತುಳಿದು ಹಾಕಿ ಅವಳನ್ನು ಮುಯ್ಯಿಗೆ ಮುಯ್ಯಿ ತೀರಿಸಿಕೊಳ್ಳಬೇಕು! ಮನೆಯನ್ನು ಬಿಟ್ಟು ಹೊರಗೆ ಹೋಗು ಎಂದವಳನ್ನು ಈ ಮನೆಯನ್ನು ಬಿಟ್ಟು....

ಬೆಳಗ್ಗೆ ಎದ್ದು ಸ್ನಾನಮಾಡಿ ನಾನು ಉಡುಪು ಧರಿಸಿಕೊಂಡ ತಕ್ಷಣ ನನ್ನ ಕೊಠಡಿಯ ಬಾಗಿಲು ತೆರೆಯಿತು. ಲಲಿತ ಬಾಗಿಲ ಬಳಿ ಅನುಮಾನಿ ಸುತ್ತ ನಿಂತಳು. ಅವಳನ್ನು ಸಾಧಾರಣವಾಗಿ ನೋಡಿಬಿಟ್ಟು, ನನ್ನ ಕೆಲಸ ಗಮನಿಸುವವನ ಹಾಗೆ ಕುರ್ಚಿಯಲ್ಲಿ ಕುಳಿತು ಪತ್ರಿಕೆಗಳನ್ನು ತಿರುವಿಹಾಕಿದೆ.

'ಬನ್ನಿ'

—ಎಂದು ನಾನು ಕರೆಯಲಿಲ್ಲ. ಅವಳು ಬಂದಳು.

'ಕುಳಿತುಕೊಳ್ಳಿ'

—ಎಂದು ಉಪಚರಿಸಲಿಲ್ಲ. ಅವಳು ಕುಳಿತಳು. ಗಂಡಸರನ್ನು ಮರುಳುಗೊಳಿಸಲು ಹೆಂಗಸರು ಉಪಯೋಗಿಸುವ ಕೊನೆಯ ಅಸ್ತ್ರವೆಂದು ಹೇಳುತ್ತಾರಲ್ಲ, ಆ ಕಣ್ಣೀರನ್ನು ಅವಳು ತನ್ನ ಮೊದಲ ಅಸ್ತ್ರವನ್ನಾಗೇ ಉಪಯೋಗಿಸಿದಳು. ನನ್ನೆದುರಿನಲ್ಲಿ, ನನ್ನನ್ನೇ ನೆಟ್ಟದೃಷ್ಟಿಯಿಂದ ನೋಡುತ್ತಿದ್ದ ಅವಳ ಕಣ್ಣುಗಳು ಧಾರೆಧಾರೆಯಾಗಿ ಕಣ್ಣೀರ ಮುತ್ತುಗಳನ್ನು ಉದುರಿಸುತ್ತಿದ್ದವು.

"ಅವರ ಆರೋಗ್ಯವು ಶೀರ ಕೆಟ್ಟಿದೆ. ನಿಮ್ಮನ್ನು ನೋಡಬಯಸುತ್ತಾರೆ."

"ನನಗೆ ಚಿಕಿತ್ಸೆ ಮಾಡಲು ಗೊತ್ತಿಲ್ಲ, ನಾನು ಡಾಕ್ಟರಲ್ಲ."

"ನಿಮಗೆ ಕರುಣೆಯಿಲ್ಲವೆ?"

"ಇಲ್ಲ; ಹಾಗೆ ಇದ್ದರೂ ಕರುಣೆಯಿಂದ ಒಬ್ಬರ ರೋಗವು ಗುಣವಾಗುವುದಿಲ್ಲ."

"ನಿಮ್ಮ ಆಗಮನದಿಂದ ಗುಣವಾಗುತ್ತದೆ ಎಂದು ಅವರು ಭಾವಿಸುತ್ತಾರೆ. ನಾನೂ ಭಾವಿಸುತ್ತೇನೆ."

'ನಾನೂ ಭಾವಿಸುತ್ತೇನೆ' ಎಂದು ಅವಳು ಹೇಳಿದ ತಕ್ಷಣ ನಾನು ನನ್ನನ್ನು ಮರೆತುಬಿಟ್ಟೆ.

"ಅವರು ಭಾವಿಸಿದರೆ ಅದರಲ್ಲಿ ತಪ್ಪಿಲ್ಲ. ಆದರೆ ನೀವು? ಭಾವಿಸುವುದಕ್ಕೆ ನಿಮಗೆ ಹೃದಯವಿದೆಯೆ? ಗೌರವಿಸುವುದಕ್ಕೆ ನಿಮಗೆ ಮನಸ್ಸಿದೆಯೆ? – ನೀವು ಏಕೆ ಇಲ್ಲಿಗೆ ಬಂದಿರಿ?"

"ಸೋಮೂ!...."

ಎರಡು ಮೂರು ದಿನಗಳಿಂದ ನನ್ನನ್ನು ಹುಚ್ಚಿಡಿಸಿ ಆಡಿಸಿದ ನನ್ನ

ಮನಸ್ಸಿನ ಭ್ರಾಂತಿಯೆಲ್ಲವೂ ಅವಳನ್ನು ಕಂಡತಕ್ಷಣ ಹೊರಹೊಮ್ಮಿದವು. ತಾಳ್ಮೆಗೋ, ಯೋಚನೆಗೋ ಅಲ್ಲಿ ವೇಳೆ ಇರಲಿಲ್ಲ. ಪ್ರತೀಕಾರ ಭಾವನೆ ನನ್ನನ್ನು ಅಣುಅಣುವಾಗಿ ಆವರಿಸಿ ನುಂಗಿತು.

"ನಾನು ಯುವಕ; ನೀವು ಯುವತಿ! ನಾನು ಉನ್ಮತ್ತ; ನೀವು ಆಸರೆಯಿಲ್ಲದ ಹೆಣ್ಣು! ನಾನು ಅಯೋಗ್ಯ; ನೀವು ಸುಮಂಗಳಿ!–ಏತಕ್ಕಾಗಿ ನನ್ನ ಕೊಠಡಿಗೆ ಒಬ್ಬರೇ ಬಂದಿರಿ? ನನ್ನ ಸ್ವಭಾವವನ್ನು ತಿಳಿದ ನಂತರವೂ ಹೇಗೆ ನೀವು ಇಲ್ಲಿಗೆ ಬರಬಹುದು?"

"ನನ್ನನ್ನು ಕ್ಷಮಿಸುವುದಿಲ್ಲವೇ, ಸೋಮು?"

—ಎಂದು ಅವಳು ಬಿಕ್ಕಿದಳು.

"ಮೊದಲು ಇದನ್ನು ತಿಳಿದುಕೊಳ್ಳಿ. ನಾನು ನಿಮ್ಮನ್ನು ಪ್ರೇಮಿಸಲಿಲ್ಲ. ನಿಮ್ಮ ಸೌಂದರ್ಯದಲ್ಲೋ, ಯೌವನದಲ್ಲೋ, ಹಣದಲ್ಲೋ ನನ್ನ ಮನಸ್ಸನ್ನು ಬಲಿಗೊಡಲಿಲ್ಲ. ಬೇರೇನನ್ನೂ ನಾನು ನಿಮ್ಮಲ್ಲಿ ನಿರೀಕ್ಷಿಸುವುದಿಲ್ಲ."

"ಸೋಮು ನಿಮಗೆ ಪ್ರೀತಿಯಲ್ಲಿ ನಂಬಿಕೆಯಿಲ್ಲವೆ?"

"ಇದೆ; ಪ್ರೀತಿಯೆಂದರೆ ಬಾಳನ್ನು ಹಾಳು ಮಾಡುವ ಯಮನು ಎಂಬ ರೀತಿಯಲ್ಲಿ."

"ನನ್ನ ಸ್ವಜ್ಞಾನದಲ್ಲಿ ನಾನು ಅಂದು ಇರಲಿಲ್ಲ. ಅಳತೆ ಮೀರಿದ ಆವೇಶದಲ್ಲಿದ್ದೆ. ನನ್ನನ್ನು ಭೂತವನ್ನಾಗಿ ಮಾರ್ಪಡಿಸಿಬಿಟ್ಟ ಸೇತು.–ನನ್ನ ಜೀವನದಲ್ಲಿ ಎಲ್ಲೋ ಒಂದು ಕಡೆ ಕೊರತೆಯಿರುವುದು ಅಂದು ನಾನು ಅರಿತುಕೊಂಡೆ. ಆ ಕೊರತೆಯಿಂದಾಗಿ ಉಂಟಾದ ಬಲಹೀನತೆಯೊಂದಿಗೆ ಸೇತುರಾಮನು ಆಟವಾಡ ಬಯಸಿದನು. ನನ್ನ ಹೃದಯಕ್ಕೆ ಅಂದು ಬೆಂಕಿ ಹತ್ತಿಕೊಂಡಿತು. ಆ ಬೆಂಕಿಗೆ ನಿಮ್ಮ ಪ್ರೀತಿಯ ರೂಪವು ಕಾಣಿಸಲಿಲ್ಲ. ನೀವು ನನ್ನನ್ನು ನಂಬುವುದಿಲ್ಲವೇ?"

"ನಂಬಿದ್ದು ಸಾಕು. ದಯವಿಟ್ಟು ಇಲ್ಲಿಂದ ಹೊರಟು ಹೋಗಿ.

ಆವೇಶಗೊಳ್ಳುವ ಹಕ್ಕು ನಿಮಗೆ ಮಾತ್ರವಲ್ಲ. ಮಾನವ ಸ್ವಭಾವಕ್ಕೆ ನಾನೂ ದಾಸನೇ."

"ಸೋಮು....ನಾನು....ನನ್ನನ್ನು ನೀವು ಅರ್ಥಮಾಡಿಕೊಂಡಿಲ್ಲ."

"ನಿಮ್ಮನ್ನು ಚೆನ್ನಾಗಿ ಬಲ್ಲೆ."

"ಬಲ್ಲಿರಾ?"

—ಎಂದಳು ಕಣ್ಣುಗಳಲ್ಲಿ ನೀರು ಹಾಕುತ್ತಾ.

"ಅದರಿಂದಲೇ ಹೇಳುತ್ತೇನೆ. ಒಬ್ಬರನ್ನೊಬ್ಬರು ಇನ್ನು ಮೇಲೆ ಸಂಧಿಸದೇ ಇರುವುದು ಇಬ್ಬರಿಗೂ ಶೋಭೆ. ನಾನು ಅವಿವಾಹಿತ. ನೀವು ನನ್ನ ಗೆಳೆಯರ ಹೆಂಡತಿ. ಪ್ರೀತಿ ಎಂಬ ಪದಕ್ಕೆ ನಮ್ಮಲ್ಲಿ ಪ್ರಾಮಾಣಿಕ ವಾದ ಅರ್ಥ ಸಿಗುವುದು ದುರ್ಲಭ. ಗೆಳತಿ ಎಂಬ ರೀತಿಯಲ್ಲಿ ಈ ಸಂದರ್ಭದ ನಂತರ ನಾನು ನಿಮ್ಮೊಡನೆ ನಡೆದುಕೊಳ್ಳಲು ಸಾಧ್ಯವಿಲ್ಲ!"

"ಅವರು ನಿಮ್ಮನ್ನು ನೋಡಬೇಕೆಂದು ತಪಿಸುತ್ತಿದ್ದಾರೆ. ನೀವು ಅಂದು ಮನೆಬಿಟ್ಟು ಹೊರಗೆ ಬಂದ ತಕ್ಷಣ, ನಿಮ್ಮನ್ನು ಹುಡುಕಲು ಅವಸರ ವಾಗಿ ನಡೆದು, ಮೆಟ್ಟಲಿನಿಂದ ಕಾಲು ಜಾರಿ ಕೆಳಗೆ ಬಿದ್ದುಬಿಟ್ಟರು. ಆಗ ಬಿದ್ದವರು ಇನ್ನೂ ಹಾಸಿಗೆ ಬಿಟ್ಟೇಳಲಿಲ್ಲ."

ನನ್ನನ್ನು ಹುಡುಕಿ ಬಂದವರು ಕೆಳಗೆ ಬಿದ್ದುಬಿಟ್ಟರು ಎಂದು ಕೇಳಿದ ತಕ್ಷಣ ನನ್ನ ಆವೇಶವೆಲ್ಲವೂ ಇಳಿದು ಹೋಯಿತು. ಓಡೋಡಿ ಹೋಗಿ ಅವರನ್ನು ನೋಡಬಯಸಿದೆ. ಅವರಲ್ಲಿ ನನ್ನ ತಪ್ಪಿಗೆ—ಮೊದಲೇ ಹೋಗಿ ಅವರನ್ನು ನೋಡದೆ ಇದ್ದಿದ್ದಕ್ಕೆ—ಕ್ಷಮೆ ಕೇಳಿಕೊಳ್ಳಲು ಕಾತರಿಸಿದೆ. ನನ್ನಿಂದಲೇ ಇಂದು ಅವರು ಹಾಸಿಗೆ ಹಿಡಿದಿರುವುದು? ಅವರ ಈ ಸ್ಥಿತಿಗೆ ಕಾರಣ ನಾನೇ?

"ಅವರು ಮಾತ್ರವಲ್ಲ; ನಿಮ್ಮನ್ನು ನೋಡದೆ ನನ್ನಿಂದಲೂ ಇರಲಾಗ ಲಿಲ್ಲ. ಈ ಎರಡು ಮೂರು ದಿನಗಳಿಂದ....ಸೋಮೂ!...."

ಅವರಿಗಾಗಿ ಕರಗಿದ ನನ್ನ ಮನಸ್ಸು ಈಗ ಅವಳಿಗಾಗಿಯೂ ಕರಗಿತು.

ಅವಳು ಮೇಜೆಯಲ್ಲಿ ತನ್ನ ತಲೆಯನ್ನು ಬಾಗಿಸಿ, ಒಂದೇ ಸಮನೆ ಅಳತೊಡಗಿದಳು. ಈ ಹೃದಯ ವಿದ್ರಾವಕ ದೃಶ್ಯವನ್ನು ನನ್ನಿಂದ ನೋಡ ಲಾಗಲಿಲ್ಲ. ಹೆಣ್ಣಾಗಿ ಹುಟ್ಟುವುದೇ ಪಾಪವೆನ್ನುತ್ತಾರೆ, ನಿಜವೆ; ಅದೂ ಈ ದೇಶದಲ್ಲಿ ಹೆಣ್ಣಾಗಿ ಹುಟ್ಟುವುದು ಮಹಾಪಾಪ. ಕೋಮಲವಾದ ಹೆಣ್ಣಿನ ಹೃದಯವನ್ನು ಒಂದೆರಡು ನಿಮಿಷಗಳಲ್ಲಿ ಎಷ್ಟು ನೋಯಿಸಿಬಿಟ್ಟೆ!

ದೀರ್ಘ ನಿಟ್ಟುಸಿರು ಬಿಟ್ಟುಕೊಂಡು ಅವಳು ತಲೆಯನ್ನು ಮೇಲಕ್ಕೆತ್ತಿ ದಳು. ಕಣ್ಣುಗಳನ್ನು ಒರೆಸಿಕೊಂಡಳು.

"ಬರುತ್ತೀರಾ ಹೋಗೋಣ?"

—ಎಂದಳು.

ನಾನು ಪ್ರತ್ಯುತ್ತರ ಹೇಳದೆ ಅವಳನ್ನು ಹಿಂಬಾಲಿಸಿದೆ. ಬಾಗಿಲಿನಲ್ಲಿ ಕಾರು ಇರಲಿಲ್ಲ.

"ಡ್ರೈವರ್ ಬರಲು ಹೊತ್ತಾಗುವುದೆಂದು ನಡೆದೇ ಬಂದೆ"

—ಎಂದಳು.

ನಡೆದು ಹೋಗುವುದನ್ನು ಬಿಟ್ಟರೆ ಈಗ ಬೇರೆ ಮಾರ್ಗವಿರಲಿಲ್ಲ ನಾನೂ ಅವಳೂ ಒಂದಾಗಿ ಬೀದಿಯಲ್ಲಿ ನಡೆದೆವು. ನಮ್ಮನ್ನು ನೋಡುವ ಜನರು ಏನಂದುಕೊಳ್ಳುತ್ತಾರೆ ಎನ್ನುವುದನ್ನು ಯೋಚಿಸಲು ನನಗೆ ವೇಳೆ ಯಿರಲಿಲ್ಲ.

ತೋಟದ ಪಕ್ಕದಲ್ಲೇ ಇದ್ದ ಒಂದು ಅಗಲವಾದ ಕೋಣೆಯಲ್ಲಿ ಮಲ ಗಿದ್ದರು ನಾರಾಯಣಸ್ವಾಮಿ. ಅರೆಜೀವವಾಗಿ ಹೋಗಿದ್ದರು. ನನ್ನನ್ನು ಕಂಡತಕ್ಷಣ ಮುಖದಲ್ಲಿ ಸಂತೋಷವನ್ನು ಸೂಚಿಸುತ್ತಾ ಆಹ್ವಾನಿಸಿದರು. ಅವರ ಮೊಣಕಾಲಿನ ಬಳಿ ಬಲವಾದ ಘಾಯದ ಪಟ್ಟಿಯನ್ನು ಕಟ್ಟಿದ್ದರು. ಪಕ್ಕದ ಕುರ್ಚಿಯಲ್ಲಿ ಕೂಡುವಂತೆ ಕೈ ತೋರಿಸಿದರು.

"ಇವತ್ತೇ ನಿಮ್ಮ ದೇಹಸ್ಥಿತಿಯನ್ನು ಕುರಿತು ತಿಳಿಯಿತು. ಇದುವರೆಗೆ ಬರದೆ ಇದ್ದುದಕ್ಕಾಗಿ ಕ್ಷಮಿಸಿಬಿಡಿ"

—ಎಂದೆ.

"ಪರವಾಯಿಲ್ಲ"

—ಎಂದರು ಹಸನ್ಮುಖರಾಗಿ.

"ಎರಡು ದಿನಗಳಿಗೆ ಹಿಂದಿನ ತನಕ ಕಾಲಿನ ಬಗ್ಗೆ ಹೆಚ್ಚು ಭೀತಿಯಿತ್ತು. ಈಗ ಆ ಭೀತಿಯಿಲ್ಲ. ಖಂಡಿತ ಗುಣವಾಗುತ್ತದೆಂದು ಡಾಕ್ಟರು ಹೇಳಿದ್ದಾರೆ"

—ಎಂದರು ನಾರಾಯಣಸ್ವಾಮಿ.

ನಾನು ಮೌನವಾಗಿದ್ದೆ.

"ನಿಮ್ಮನ್ನು ನೋಡಿದ ತಕ್ಷಣ ನನಗೆ ಎಲ್ಲಾ ಚಿಂತೆಗಳು ಹಾರಿ ಹೋದುವು. ಬಹು ಬೇಗನೇ ಮೊದಲಿನ ಹಾಗೆ ಎದ್ದು ಓಡಾಡುತ್ತೇನೆ"

—ಎಂದರು.

"ನನ್ನಿಂದಲೇ ನಿಮಗೆ ಈ ಕಷ್ಟವೆಲ್ಲವೂ ಬಂತು. ಕಷ್ಟವನ್ನು ಕೊಟ್ಟ ನಾನು ಅದನ್ನು ಕುರಿತು ತಿಳಿದುಕೊಳ್ಳದೆಯೇ ಇದ್ದುಬಿಟ್ಟೆ"

—ಎಂದೆ.

ನನ್ನ ಗಂಟಲು ತುಂಬಿ ಬಂತು.

"ನನಗೆ ಇದು ಕಷ್ಟವೆಂದೇ ಕಾಣುತ್ತಿಲ್ಲ ಸೋಮು. ಕಷ್ಟದಿಂದ ಸಿಗುವ ಸುಖವಿದೆಯಲ್ಲಾ, ಅದಕ್ಕಿಂತಲೂ ಇಂಪಾದುದು ಪ್ರಪಂಚದಲ್ಲಿ ಬೇರೆ ಯಾವುದೂ ಇಲ್ಲ. ಈ ಮೂರು ದಿನಗಳಲ್ಲಿ ಲಲಿತಳ ಸೇವೆಯನ್ನು ಕಂಡು ನಾನು ಭ್ರಮಿಸಿ ಹೋದೆ. ನಾನು ಕೆಳಗೆ ಬಿದ್ದಂದಿನಿಂದ ಅವಳು ಆಹಾರವನ್ನೂ ನಿದ್ದೆಯನ್ನೂ ಮರೆತೇ ಬಿಟ್ಟಳು."

ಲಲಿತಳ ಸ್ಥಿತಿಯನ್ನು ಕಂಡ ಯಾರೇ ಆಗಲಿ ಅವರ ಮಾತುಗಳನ್ನು ಹಾಗೆಯೇ ನಂಬಬೇಕು. ಇನ್ನೂ ಎರಡು ದಿನಗಳು ಅವಳು ಈ ರೀತಿ ನಡೆದುಕೊಂಡರೆ, ಅವಳಿಗಾಗಿ ಆ ಮನೆಯಲ್ಲಿ ಇನ್ನೊಂದು ಹಾಸಿಗೆಯು ಸಿದ್ಧಗೊಳಿಸಬೇಕಾಗುತ್ತದೆ.

ನಾರಾಯಣಸ್ವಾಮಿ ಮುಂದೆ ಹೇಳಿದರು :

" ಸೋಮು ! ಇಗೋ ನಿನ್ನ ಕಣ್ಣುಗಳಲ್ಲಿ ನನಗಾಗಿ ನೀರು ಚಿಮ್ಮುತ್ತಿದೆಯಲ್ಲಾ, ಇದು ಕಷ್ಟದಿಂದ ನನಗೆ ಸಿಗುತ್ತಿರುವ ಸ್ವರ್ಗಸುಖವಲ್ಲವೆ ?"

ಅವರ ಸರಳ ಸ್ವಭಾವ, ತಿಳಿಹೃದಯವು ನನ್ನ ಕಣ್ಣೆದುರಿನಲ್ಲಿ ಕಾಣಿಸಿಕೊಂಡಿತು. ನನ್ನನ್ನು ಅವರಿಗೆ ತೋರಿಸಿಕೊಟ್ಟ ನನ್ನ ಕಣ್ಣುಗಳನ್ನು ಬೇರೆ ಕಡೆಗೆ ತಿರುಗಿಸಿ ಒರೆಸಿಕೊಂಡೆ.

" ನನಗೆ ಈ ತಿಂಗಳ ಕೆಲಸವೆಲ್ಲವೂ ನಿನ್ನೆಗೇ ಮುಗಿದು ಹೋಯಿತು. ಇನ್ನು ಮೇಲೆ ಯಾವಾಗಲೂ ನಿಮ್ಮ ಹತ್ತಿರವೇ ಇರುತ್ತೇನೆ. ನಿಮಗಾಗಿ ಲಲಿತ ಮಾಡುವ ಕೆಲಸದಲ್ಲಿ ನನಗೂ ಸ್ವಲ್ಪ ಭಾಗ ಸಿಕ್ಕಿದರೆ ಅಷ್ಟೇ ಸಾಕು "

—ಎಂದೆ.

" ತುಂಬಾ ಕೆಲಸ ಕೊಡುತ್ತೇನೆ ; ಯಾವಾಗಲೂ ಪಕ್ಕದಲ್ಲಿ ಕುಳಿತು ಮಾತನಾಡುತ್ತಾ ಇರಿ ! ಅದುವೇ ನಾನು ಬಯಸುವ ಮುಖ್ಯವಾದ ಸಹಾಯ"

—ಎಂದರು.

ಅದರ ನಂತರ ಒಂದು ವಾರ ಹಗಲೆಲ್ಲಾ ಅನೇಕವಾಗಿ ಗೆಳೆಯರ ಮನೆಯಲ್ಲಿ ಕಳೆದೆ. ಆಫೀಸ್ ಕೆಲಸವೆಲ್ಲವನ್ನೂ ಮಧ್ಯಾಹ್ನದೊಳಗೆ ಮುಗಿಸಿ, ಊಟವಾದ ತಕ್ಷಣ ಇಲ್ಲಿಗೆ ಬಂದುಬಿಡುತ್ತಿದ್ದೆ. ಮತ್ತೆ ನನ್ನ ಕೊಠಡಿಗೆ ಹೋಗುವಷ್ಟರಲ್ಲೆ ಚೆನ್ನಾಗಿ ಕತ್ತಲಾಗುತಿತ್ತು. ಅಷ್ಟರತನಕ ಅವರ ಹಾಸಿಗೆಯ ಪಕ್ಕದಲ್ಲೋ ಗ್ರಂಥಭಂಡಾರದಲ್ಲೋ ವೇಳೆಯನ್ನು ಕಳೆಯುತ್ತಿದ್ದೆ.

ಈ ಒಂದು ವಾರದಲ್ಲಿ ಲಲಿತಳು ತನ್ನ ಗಂಡನ ಬಳಿ ನಡೆದುಕೊಂಡ ರೀತಿಯನ್ನು ಕಂಡು ಚಕಿತನಾದೆ. ಬೇರೆ ಯಾರನ್ನೂ ಅವರಿಗೆ ಶುಶ್ರೂಷೆ ಮಾಡಲು ಅವಳು ಬಿಡಲಿಲ್ಲ. ನಾನು ಮಾಡಬಯಸಿದ ಅಲ್ಪ ಸೇವೆಗಳಿಗೂ ಅವಳು ಅಡ್ಡಿಯಾದಳು. ಅವರ ಭಾವವರಿತು, ಅವರು ಬಾಯಿ ತೆರೆದು ಹೇಳುವುದರೊಳಗೇ ಅವರಿಗೆ ಬೇಕಾದುದನ್ನು ಮಾಡುತ್ತಿದ್ದಳು. ಅವರನ್ನು ಶ್ರಮವಿಲ್ಲದೆ, ಸಂತೋಷವಾಗಿಡುವುದಕ್ಕೆ ಎಷ್ಟು ಬಗೆಗಳಲ್ಲಿ ಶ್ರಮವಹಿಸ

ಬೇಕೋ ಅಷ್ಟು ವಹಿಸಿದಳು. ಆಸ್ಪತ್ರೆಗಳಲ್ಲಿ ಬಿದ್ದು ನರಳುವ ಪ್ರತಿಯೊಬ್ಬ ರೋಗಿಯ ಬಳಿಯೂ ಇಂಥಾ ಒಂದೊಂದು ಹೆಣ್ಣು ಇದ್ದರೆ?

ನಾರಾಯಣಸ್ವಾಮಿಯನ್ನು ಲಕ್ಷ್ಯವಿಟ್ಟು ಎಷ್ಟು ಜಾಗರೂಕತೆಯಿಂದ ಉಪಚರಿಸುತ್ತಿದ್ದಳೋ ಹಾಗೆಯೇ ಈಗ ತನ್ನನ್ನೂ ಲಕ್ಷ್ಯದಿಂದ ನೋಡಿಕೊಂಡಳು ಲಲಿತ. ನಿತ್ಯವೂ ತಲೆಬಾಚಿ ಹೆಣೆದುಕೊಂಡಳು. ತೋಟದ ಪುಷ್ಪಗಳಲ್ಲಿ ಅರ್ಧಕ್ಕಿಂತಲೂ ಹೆಚ್ಚು ಅವಳ ತಲೆಯಲ್ಲಿ ಶೋಭಿಸುತ್ತಿದ್ದುವು. ದಿನಕ್ಕೊಂದು ರೀತಿಯ ಸೀರೆಯನ್ನೂ, ಹೊತ್ತಿಗೊಂದು ಬಣ್ಣದ ಕುಪ್ಪಸವನ್ನೂ ತೊಟ್ಟು ಅವಳು ಕಂಗೊಳಿಸುತ್ತಿದ್ದಳು ಹೊಳಪನ್ನು ಚೆಲ್ಲುವ ಕಣ್ಣುಗಳಿಂದಲೂ, ಮಂದಹಾಸ ಬೀರುವ ತುಟಿಗಳಿಂದಲೂ ಅವಳು ಆ ದೊಡ್ಡ ಮನೆಯಲ್ಲಿ ಅಲ್ಲಿಂದಿಲ್ಲಿಗೆ ಅಲೆಯುತ್ತಿದ್ದಳು. ಅವಳ ಗಂಡನ ಕೊಠಡಿಯನ್ನು ಸುತ್ತಿ ಸುತ್ತಿ ಬರುತ್ತಿದ್ದಳು.

ಜೊತೆಗೆ ನನ್ನೊಡನೆಯೂ ಅವಳು ಹೆಚ್ಚು ಸಲಿಗೆಯಿಂದ ನಡೆದುಕೊಂಡಳು. ಅವಳ ಅತ್ತೆ, ಮಾವ, ಕೆಲಸದವರು ಮುಂತಾದವರ ಸಂಶಯ ದೃಷ್ಟಿಯನ್ನೂ ಅವಳು ಲಕ್ಷ್ಯಮಾಡಲಿಲ್ಲ. ಅವಳ ಈ ನಡತೆ ನನಗೆ ವಿಚಿತ್ರವಾಗಿ ಕಂಡಿತು. ಸಂಕಟವಾಗಿಯೂ ಇತ್ತು.

"ಊಟ ಮುಗಿಸಿಕೊಂಡೇ ಹೋಗಬೇಕು; ಇವತ್ತು ಊಟ ಮಾಡದೆ ಹೋಗಬಾರದು"

—ಎಂದು ಒತ್ತಾಯ ಮಾಡಿದಳು.

"ಪದೇ ಪದೇ ಕಾಫಿ ಕುಡಿಯುತ್ತೀರಂತೆ! ನಮ್ಮ ಮನೆಯ ಕಾಫಿ ಹಿಡಿಸಲಿಲ್ಲವೇ?"

—ಎನ್ನುತ್ತಿದ್ದಳು.

ಕಾಂತಳು ನನ್ನ ಬಗ್ಗೆ ಇವಳಿಗೆ ತುಂಬ ಹೇಳಿದ್ದಾಳೆ. ಇವಳೂ ತಾನಾಗಿಯೇ ನನ್ನ ಇಷ್ಟಾಯಿಷ್ಟಗಳನ್ನೂ, ಮನೋಭಾವವನ್ನೂ ತಿಳಿದಿಟ್ಟಿದ್ದಾಳೆ. ಆದ್ದರಿಂದಲೇ ಉಪಚಾರದ ಕ್ರಮದಲ್ಲಿ ಅವಳ ಗಂಡನ ನಂತರದ ರೋಗಿಯೆಂದು ನನ್ನನ್ನು ತೀರ್ಮಾನಿಸಿ ಬಿಟ್ಟಳು ಲಲಿತ!

ಮದರಾಸಿನಿಂದ ಪ್ರಕಟವಾದ ನನ್ನ ಇತ್ತೀಚಿನ ಕಾದಂಬರಿಯೊಂದು ನಾರಾಯಣಸ್ವಾಮಿಯವರ ಪುಸ್ತಕ ಕಪಾಟಿನಲ್ಲಿತ್ತು. ಕಾದಂಬರಿ ಹೊರ ಬಂದು ಇನ್ನೂ ಒಂದು ವಾರವೂ ಆಗಿರಲಿಲ್ಲ. ಎರಡು ದಿನಗಳ ಹಿಂದೆತಾನೇ ನನಗೂ ಪ್ರತಿಗಳು ಬಂದವು. ನಾರಾಯಣಸ್ವಾಮಿ ಪೂರ್ಣವಾಗಿ ಸ್ವಸ್ಥ ಗೊಂಡು ಎದ್ದ ಮೇಲೆ ಒಂದು ಪ್ರತಿಯನ್ನು ತಂದು ಕೊಡೋಣವೆಂದಿದ್ದೆ. ಅಷ್ಟರಲ್ಲೇ ಅದು ಇಲ್ಲಿಗೆ ಹೇಗೋ ಬಂದುಬಿಟ್ಟಿತು, ಅವರು ಹಾಸಿಗೆಯಿಂದೇ ಳುವ ಮೊದಲೇ !

ಪುಸ್ತಕವನ್ನು ತೆರೆದು ನೋಡಿದೆ. ಅದನ್ನು ಲಲಿತ ಓದಿರುವ ಚಿಹ್ನೆ ಗಳು ಕಂಡವು. ಅವಳು ಓದುವ ಪುಸ್ತಕಗಳಲ್ಲೆಲ್ಲಾ ಅವಳಿಗೆ ಮೆಚ್ಚುಗೆ ಯಾದ ವಾಕ್ಯಗಳ ಕೆಳಗೆ ಪೆನ್ಸಿಲ್ ಗೆರೆಗಳನ್ನು ಕಾಣಬಹುದು. ಈ ಪುಸ್ತಕದ ಕೆಲವು ಪುಟಗಳೆಲ್ಲವೂ ಪೆನ್ಸಿಲ್‌ಮಯವಾಗಿದ್ದುವು.

ಹಲವು ತಿಂಗಳುಗಳ ಹಿಂದೆ ನಾನು ಬರೆದ ನುಡಿಗಳನ್ನು ಇಂದು ಮತ್ತೆ ಓದಿದೆ. ಆ ವಾಕ್ಯಗಳ ಕೆಳಗಿನ ಗೆರೆಗಳು ಬೇರೆ ಗೆರೆಗಳಿಗಿಂತಲೂ ಒತ್ತಿ ಬರೆಯಲಾಗಿತ್ತು ನನಗೇ ಈಗ ಆ ಬರಹದ ಅರ್ಥವು ಹೊಸ ರೀತಿ ಯಾಗಿ ಕಂಡಿತು. ಮೊದಲು ನಾನು ಅದನ್ನು ಯಾವ ಭಾವದಿಂದ ಬರೆದೆನೋ, ಆದರೆ ಇಂದು....?

**'ಹತ್ತಿಯ ರಾಶಿಯಂತೆ ಬೆಳ್ಳಗೆ ನಿರ್ಮಲವಾಗಿದ್ದ ನನ್ನ ಹೃದಯದಲ್ಲಿ, ನನ್ನನ್ನರಿಯದೇ ಒಂದು ದಿನ ಅತಿ ಸೂಕ್ಷ್ಮ ಕಿಡಿ ಯೊಂದು ಬಿದ್ದುಹೋಯಿತು. ಬಹಳ ದಿನಗಳವರೆಗೆ ನಾನು ಅದನ್ನು ಗಮನಿಸಲೇ ಇಲ್ಲ. ಗಮನಿಸಲಿಲ್ಲವೆಂಬ ಕಾರಣಕ್ಕಾಗಿ ಆ ಕಿಡಿ ಹಾಗೇ ನಂದಿಹೋಗಿರಬಾರದೇ?....ಅಯ್ಯೋ! ಈಗ ಆ ಹತ್ತಿಯ ರಾಶಿ ಹತ್ತಿಕೊಂಡು ಉಗ್ರವಾಗಿ ಉರಿಯುತ್ತಿದೆ ಯಲ್ಲ! ನಾನೇನು ಮಾಡಲಿ?'**

ನಾನು ಬರೆದ ನುಡಿಗಳೇ ನನ್ನನ್ನು ನುಂಗಿಬಿಡುವಂತೆ ನೋಡಿದವು. ಕತೆಯ ಯಾವ ಘಟ್ಟದಲ್ಲಿ, ಯಾವ ಸಂದರ್ಭಕ್ಕೆಂದು ಇದನ್ನು ಬರೆದೆನೋ

ತಿಳಿಯದು. ಆದರೆ ಅವನ್ನು ಲಲಿತಳು ಉಪಯೋಗಿಸಿರುವ ರೀತಿ ನನ್ನನ್ನು ದಿಗ್ಭ್ರಮೆಗೊಳಿಸಿತು. ನನ್ನ ಭಾವನೆಗಳಿಂದಲೇ ನನ್ನನ್ನು ಸೇಡು ತೀರಿಸಿಕೊಳ್ಳಲು ಸಂಚಿಕೆ ಹೂಡಿದಳೇ ? ಅವಳು ಮಣ್ಣಿನಲ್ಲಿ ಕಾಣಿಸಿಕೊಳ್ಳುವಂಥವಳಲ್ಲ; ಮನದಲ್ಲಿ ಮಾತ್ರ ಕಾಣಿಸಿಕೊಳ್ಳಬೇಕಾದವಳು.

ಬಾಗಿಲ ಕಡೆಯಿಂದ ಲಲಿತಳ ನೆರಳು ಕಾಣಿಸಿತು. ಅವಳು ಬರುತ್ತಿದ್ದಳು. ಪುಸ್ತಕದ ಮರುಹಾಳೆಯನ್ನು ಬೇಕೆಂದೇ ತಿರುವಿದೆ.

"ನಿಮ್ಮ ಕತೆಯನ್ನು ನೀವೇ ಓದುತ್ತೀರೇನು ?"

"ಇಲ್ಲ; ನಾನು ಬರೆಯುತ್ತಿರುವಾಗಲೇ ಹೇಗೆ ಅದು ಮುದ್ರಣದ ಪ್ರತಿಯಾಗಿ ನಿಮ್ಮಲ್ಲಿಗೆ ಬಂದುಬಿಡುತ್ತದೆ ಎಂದು ಆಶ್ಚರ್ಯಪಟ್ಟೆ."

"ಇಷ್ಟೇನೆ ?–ನೀವು ಬರೆಯತೊಡಗುವ ಮೊದಲೇ ಯಾವ ಕತೆಯನ್ನು ಬರೆಯಲಿದ್ದೀರಿ ಎಂದು ನನಗೆ ಗೊತ್ತು !"

—ಎಂದಳು.

ನೆನಪಿನೊಳಗೆ ನೆನಪಾಗಿ ಸಂಚರಿಸಬಲ್ಲ ಈ ಮಾಟಗಾತಿಗೆ ನಾನು ಏನೆಂದು ಉತ್ತರ ಕೊಡಲಿ ?

"ನಿಮ್ಮ ಕಾದಂಬರಿಯ ಏಳನೆಯ ಪುಟವನ್ನು ತೆಗೆದು ನೋಡಿ: ಅದರಲ್ಲಿ ನೀವು ಏನು ಬರೆದಿದ್ದೀರಿ ಗೊತ್ತೇ ?"

—ಎಂದಳು.

ನಾನು ಓದಿ ನೋಡಿದೆ. ಅದರಲ್ಲಿ ನನ್ನ ಕಥಾನಾಯಕಿಯ ಉಡುಪಿನ ವರ್ಣನೆಯಿತ್ತು :

'ಅವಳು ಮಿಂಚುವ ಮೇಘವರ್ಣದ ರೇಶ್ಮೆ ಸೀರೆಯನ್ನುಟ್ಟಿದ್ದಳು ; ಮುಂಜಾನೆಯಲ್ಲಿ ಅರಳುವ ಅಚ್ಚ ಹೊಸ ಗುಲಾಬಿಯ ಬಣ್ಣದಲ್ಲಿ ಆ ಸೀರೆಗೆ ಅಗಲವಾದ ಅಂಚು ಹಾಕಿತ್ತು ; ಅದಕ್ಕೊಪ್ಪುವಂಥಾ ಕಪ್ಪುಬಣ್ಣದ ಕುಪ್ಪಸ....'

ಲಲಿತ ಕಿಲಕಿಲನೆ ನಕ್ಕಳು. ಅವಳು ನಕ್ಕಮೇಲೆ ನನಗೆ ಅದರ ಅರ್ಥವಾಯಿತು. ಅವಳ ಉಡುಪನ್ನು ಗಮನಿಸಿದೆ. ಕತೆಯಲ್ಲಿ ನಾನು ಬರೆದಿದ್ದ

ಅದೇ ಮೇಘ ವರ್ಣದ ರೇಶ್ಮೆ ಸೀರೆ, ಅದೇ ಗುಲಾಬಿಯ ಬಣ್ಣದ ಅಂಚು, ಅದೇ ಕಪ್ಪು ಬಣ್ಣದ ಕುಪ್ಪಸ....ಏನಿದು!

"ಲಲಿತಾ!"

"ನಿನ್ನೆ ತಾನೇ ಇವುಗಳನ್ನು ಕೊಂಡು ತಂದೆ."

"ನಿಮಗೆ ಸಾಧಾರಣ ಉಡುಪೇ ಚೆನ್ನಾಗಿದೆ. ನಾನೂ ಅದನ್ನೇ ಮೆಚ್ಚುತ್ತೇನೆ."

"ಸುಳ್ಳು!"

"ಸುಳ್ಳನ್ನೂ, ನಿಜವನ್ನೂ ನೀವು ವಿವೇಚಿಸಿ ನೋಡುವ ಸ್ಥಿತಿಯಲ್ಲಿಲ್ಲ!"

"ಏಕಿಲ್ಲ?"

—ಎಂದು ಕೋಪದಿಂದ ಕೇಳಿಬಿಟ್ಟು ಅವಳು ವೇಗವಾಗಿ ಹೊರಗೆ ಹೋದಳು.

ಅದೇ ಸಮಯಕ್ಕೆ ತೋಟದ ಬಾಗಿಲ ಬಳಿ ನಾರಾಯಣಸ್ವಾಮಿಯವರ ರೂಪವು ಕಾಣಿಸಿತು. ನಿನ್ನೆಯಿಂದ ಅವರು ಮೆಲ್ಲಗೆ ಎದ್ದು ನಡೆಯುವ ಶಕ್ತಿಯನ್ನು ಹೊಂದಿದ್ದರು.—ಒಂದು ವೇಳೆ ನಮ್ಮ ಮಾತುಗಳನ್ನು ಅವರು ಕೇಳಿದ್ದರೆ?

## ೧೩

ಆ ತಿಂಗಳು ಕಳೆಯಿತು. ಸ್ವಾಮಿನಾಥ ಕಾಂತಳನ್ನು ಮದುವೆಯಾಗಿ ತನ್ನ ಸ್ವಗ್ರಾಮಕ್ಕೆ ಹೋಗಿದ್ದನು. ಸೇತುರಾಮ ಅಂದಿನ ಘಟನೆಯ ನಂತರ ಮನೆಯ ಕಡೆಗೇ ತಲೆ ತೋರಿಸಲಿಲ್ಲ. ಅವನೆಲ್ಲಿದ್ದಾನೆಂದು ಯಾರಿಗೂ ತಿಳಿಯದು. ಆದರೆ ಅವನ ಪತ್ರಗಳು ಮಾತ್ರ ನನಗೆ ಆಗಿಂದಾಗ್ಗೆ ಬರುತ್ತಿದ್ದವು. ಆ ಪತ್ರಗಳ ಮೂಲಕ ನನಗೆ ನೀತಿಬೋಧೆಯನ್ನು ಮಾಡಿದನು; ನನ್ನನ್ನು ಹೆದರಿಸಿದನು; ಅಪಹಾಸ್ಯ ಮಾಡಿ ನಗುತ್ತಿದ್ದನು.

ಅಷ್ಟಕ್ಕೇ ನಿಲ್ಲಲಿಲ್ಲ. ಸ್ಥಳೀಯ 'ಹಳದಿ' ಪತ್ರಿಕೆಯೊಂದರಲ್ಲಿ ನನ್ನ ಹೆಸರು ಕಾಣಿಸಿಕೊಂಡಿತ್ತು. ಆ ಪತ್ರಿಕೆಯ ಸಂಪಾದಕರು ನನ್ನನ್ನು ನನ್ನ ನಡತೆಗಾಗಿ ಎಚ್ಚರಿಸಿದ್ದರು. ತಕ್ಷಣ ನಾನು ಸುಧಾರಿಸದಿದ್ದರೆ ಗೌರವನೀಯ ಕುಟುಂಬವೊಂದರ ಕತೆಯನ್ನು ಮುಂದಿನ ತಿಂಗಳೇ ಪ್ರಕಟಿಸುವುದಾಗಿ ಅದರಲ್ಲಿ ಒಂದು ಟಿಪ್ಪಣಿಯೂ ಹಾಕಿತ್ತು. ಸೇತುರಾಮನಲ್ಲದೆ ಬೇರೆ ಯಾರು ನನಗೆ ಈ 'ಸಹಾಯ'ವನ್ನು ಮಾಡಿರಲು ಸಾಧ್ಯ?

ತಿರುಚ್ಚಿ ನಗರದ ಬೀದಿಗಳಲ್ಲಿ ನಾನು ಮೊದಲಿನ ಹಾಗೆ ತಲೆಯೆತ್ತಿ ಕೈಬೀಸಿ ನಡೆಯಲಾಗಲಿಲ್ಲ. ನನ್ನನ್ನು ದಿಟ್ಟಿಸಿ ನೋಡುವವರೆಲ್ಲಾ ನನ್ನೆ

ಹಿಂದೆ ಅಣಕವಾಡಿ ನಗುತ್ತಿರುವ ಹಾಗೆ ಕಂಡಿತು. ಬರಹಗಾರನೆಂಬ ಬಗೆಯಲ್ಲಿ ನನ್ನನ್ನು ಕೆಲವರು ಅರಿತುಕೊಂಡಿದ್ದರು. ಪತ್ರಿಕೆಯ ಸಂಪಾದಕನಾಗಿರುವುದರಿಂದ ಹಲವು ಸಾರ್ವಜನಿಕ ಸಮಾರಂಭಗಳಲ್ಲಿ ಭಾಗವಹಿಸಿದ್ದೇನೆ. ಆಗ ಜನರು ನನ್ನನ್ನು ಕುತೂಹಲದಿಂದ ನೋಡುತ್ತಿದ್ದರೆ ನನಗೆ ಹೆಮ್ಮೆಯೆನಿಸುತ್ತಿತ್ತು. ನನ್ನ ಬರವಣಿಗೆಯೂ, ಆ ಬರವಣಿಗೆ ನೀಡಿದ ಪದವಿಯೂ ನನಗೆ ಹಲವು ಸಂದರ್ಭಗಳಲ್ಲಿ ಅಮಿತಾನಂದವನ್ನು ತಂದುಕೊಟ್ಟವೆ. ಆದರೆ ಈಗ?

ಈಗ ನನ್ನ ಹಿರಿಮೆಯ ಪರದೆ ಕಳಚಿ ಬಿದ್ದಿದೆ. ಅಣಕ, ಅಪಹಾಸ್ಯ, ಚುಚ್ಚು ನುಡಿಗಳು ನನ್ನನ್ನು ಮುತ್ತಿಕೊಂಡವು. ನಾನು ಬೀದಿಯ ಮಾರ್ಗವಾಗಿ ಎಲ್ಲಿಗೂ ಹೋಗ ಬಯಸಲಿಲ್ಲ. ಯಾವಾಗಲೂ ನನ್ನ ಕೊಠಡಿಯೊಳಗೇ ಸೇರಿಕೊಂಡಿದ್ದರೇನೇ ಶಾಂತಿ ಲಭಿಸುವ ಹಾಗೆ ಇತ್ತು.

ನನ್ನ ಮಾತಂತಿರಲಿ. ನನ್ನ ಗೆಳೆಯರು ನಾರಾಯಣಸ್ವಾಮಿ ನನಗೆ ಅನುಕಂಪ ತೋರಿಸಿದ ಪಾಪಕ್ಕಾಗಿ ಅವರ ಹೆಸರು ಕೀಳುದರ್ಜೆಯ ಜನರ ಬಾಯಿಗೆ ಬಿದ್ದು ನರಳಿತು. ಅವರ ಮನೆಯ ಸುತ್ತಲೂ ನಿರ್ದಯ ಪಾಪಿಗಳ ಅನುಮಾನದ ನುಡಿಗಳು ಬೆಂಕಿಯ ಹಾಗೆ ಹತ್ತಿ ಉರಿಯುತ್ತಿರುವುದನ್ನು ನನ್ನ ಕಣ್ಣುಗಳಲ್ಲಿ ಕಂಡೆ. ಆ ಬೆಂಕಿಯನ್ನು ಅಲ್ಲಿ ಹಾಗೆ ಹತ್ತಿಸಿದ್ದು ಸೇತುರಾಮನೇ? ನಾನೇ? ಅಥವಾ....ಅಥವಾ....ಅವರ ಹೆಸರನ್ನು ಇಲ್ಲಿ ಬರೆಯಲು ನನ್ನ ಕೈ ನಡುಗುತ್ತದೆ.

ಅದರಲ್ಲಿ ನನ್ನದೂ ಒಂದು ಭಾಗವಿದೆ. ಅದನ್ನು ನಾನು ಮರೆಸಲು ನೋಡುವುದು ಶೀಲವಲ್ಲ. ನಾನೇಕೆ ಆ ದುರ್ದೈವದ ದಿನ ಮೊತ್ತಮೊದಲು ಅಲ್ಲಿಗೆ ಹೋದೆ? ಅವರೇಕೆ ನನ್ನನ್ನು ಉತ್ಸಾಹದಿಂದ ಉಪಚರಿಸಿದರು? ಅವಳಿಗೇಕೆ ನನ್ನನ್ನು ಪರಿಚಯ ಮಾಡಿಸಿ, ಅವಳೊಂದಿಗೆ ನಿಕಟ ಸಂಪರ್ಕದಿಂದಿರಲು ಅನುಮತಿಸಿದರು?–ಅವಳು ಗೆಳತಿಯೇ? ಊರಿನವರ ಅಪವಾದ ನುಡಿಗಳಲ್ಲಿ ನಿಜವಿಲ್ಲವೆ?

ಈ ಉಪದ್ರವಗಳಿಗೆಲ್ಲಾ ಒಂದು ಕೊನೆಗಾಲ ಸಮೀಪಿಸುತ್ತಿತ್ತು.

ಲಲಿತಳೂ ನಾನೂ ಅವಳ ಕೊಠಡಿಯಲ್ಲಿ ಕುಳಿತಿದ್ದೆವು. ನಮ್ಮಿಬ್ಬರ ಮಧ್ಯೆ ನಾನು ಮೊದಲು ಹೇಳಿದ ಆ ಸ್ಥಳೀಯ ಪತ್ರಿಕೆ ಇತ್ತು. ಅವಳ ಕಣ್ಣುಗಳು ತುಂಬಿಬಂದಿದ್ದವು.

"ಲಲಿತ, ನಾನು ಬೊಂಬಾಯಿಗೆ ಹೋಗಲಿದ್ದೇನೆ"

—ಎಂದೆ.

"ಏನು ಕೆಲಸದ ಮೇಲೆ ಹೋಗುತ್ತೀರಿ ?"

"ಮುಖ್ಯವಾದ ಕೆಲಸವೇನೂ ಇಲ್ಲ. ನನ್ನ ಬರಹಗಾರ ಮಿತ್ರನೊಬ್ಬ ಅಲ್ಲಿದ್ದಾನೆ. ಬಹಳ ದಿನಗಳಿಂದ ನನ್ನನ್ನು ಅಲ್ಲಿಗೆ ಬರುವಂತೆ ಪೀಡಿಸುತ್ತಿದ್ದಾನೆ. ಬೊಂಬಾಯಿಗೆ ಹೋಗಿ ಅವನನ್ನೂ ಕರೆದುಕೊಂಡು ಉತ್ತರ ಭಾರತದಲ್ಲಿ ಕೆಲವು ತಿಂಗಳು ತಿರುಗಾಡಿಕೊಂಡು ಬರೋಣವೆಂದಿದ್ದೇನೆ."

"ಎಷ್ಟು ದಿನಗಳಲ್ಲಿ ಹಿಂದಿರುಗುವಿರಿ ?"

"ಐದಾರು ತಿಂಗಳಾಗಬಹುದು"

—ಎಂದೆ.

ನನ್ನನ್ನು ಅವಳು ಅರ್ಥಮಾಡಿಕೊಂಡಳು. ಏತಕ್ಕಾಗಿ ಹೊರಡುತ್ತೇನೆ ಎಂದೂ ಅರಿತುಕೊಂಡಳು.

"ನಿಮಗೆ ಆ ಶ್ರಮವು ನಾನು ಕೊಡುವುದಿಲ್ಲ. ಬೇಗನೆ ನಾವೇ ಬರ್ಮಾಗೆ ಹೋಗಿಬಿಡುತ್ತೇವೆ. ಅಲ್ಲೇ ನಿರಂತರವಾಗಿ ನಿಂತುಬಿಡೋಣವೆಂದು ತೀರ್ಮಾನಿಸಿದ್ದೇವೆ."

"ಬೇಡಿ ಲಲಿತ; ನನಗಾಗಿ ನೀವು ಏನೂ ಮಾಡಬೇಡಿ."

"ನಿಮಗೆ ನಾನು ಕೊಟ್ಟ ದುಃಖ ಸಾಕು. ನಿಮ್ಮ ಕೀರ್ತಿಗೆ ನಾನು ದೊಡ್ಡ ಕಳಂಕವನ್ನು ತಂದೊಡ್ಡಿದೆ. ನೀವು ಈ ದೇಶಕ್ಕೆ ಉಪಯೋಗವಾಗತಕ್ಕವರು."

"ಇಲ್ಲ ಲಲಿತಾ! ತಪ್ಪು ನನ್ನದೇ ನಾನೇ ಅಪರಾಧಿ."

"ಯಾವುದು ತಪ್ಪು, ಯಾವುದು ಸರಿ ಎಂಬುದನ್ನು ನೀವೊ ನಾನೋ ತೀರ್ಮಾನಿಸಲು ಸಾಧ್ಯವಿಲ್ಲ. ಒಂದು ಮಾತ್ರ ನಿಮ್ಮನ್ನು ಬೇ ಕೊಳ್ಳುತ್ತೇನೆ: ದಯವಿಟ್ಟು ನೀವು ಈಗ ಬೊಂಬಾಯಿಗೆ ಹೋಗಬೇಡಿ ನಾವು ಬರ್ಮಾಗೆ ಹೊರಡಲು ನಿಶ್ಚಯಿಸಿಬಿಟ್ಟಿದ್ದೇವೆ. ಇಲ್ಲಿಂದ ನಾವ ಹೋಗುವತನಕವಾದರೂ ನೀವು ತಿರುಚಿಯಲ್ಲಿ ಇರಲೇಬೇಕು."

ನಮ್ಮ ಮಾತುಗಳನ್ನು ಕೇಳಿಸಿಕೊಂಡಿದ್ದವರ ಹಾಗೆ, ಮಾತಿನ ಮಧ್ಯೆ ಒಳಗೆ ಬಂದರು ನಾರಾಯಣಸ್ವಾಮಿ. ಬರುತ್ತಾ,

"ಅಹುದು, ನಾವು ಬರ್ಮಾ ಹೋಗಬೇಕೆಂದು ಲಲಿತಳು ತೀರ್ಮಾ ನಿಸಿ ಬಿಟ್ಟಳು. ಅವಳ ತೀರ್ಮಾನವನ್ನು ಒಂದೇ ಒಂದು ತಿದ್ದುಪಡಿಯಿಂದ ನಾನು ಅಂಗೀಕರಿಸಿದ್ದೇನೆ!"

—ಎಂದು ಹೇಳಿ ಅವರು ನಕ್ಕರು.

ಹೃದಯ ತಲ್ಲಣಿಸಿ ದುಃಖಪಡಬೇಕಾದ ಇವರು ಹೀಗೆ ತಮಾಷೆ ಮಾಡಿ ನಗುತ್ತಿದ್ದುದು ನನಗೆ ಅರ್ಥವಾಗಲಿಲ್ಲ. ದುಃಖವನ್ನು ಅದರ ಚೌಕಟ್ಟಿ ನೊಳಗೇ ಇರಿಸಿ ಮರೆಯಲು ಈ ನಗುವೆ? ಅಥವಾ ಅದನ್ನು ಮರೆಸು ವುದಕ್ಕೋ?

"ಬರ್ಮಾ ಸರ್ಕಾರದಲ್ಲಿ ನನ್ನ ತಮ್ಮ ಇಂಜನೀಯರಾಗಿ ಇದ್ದಾನೆ. ಅವನಿಗೆ ನಾನು ಇಲ್ಲಿ ಲಲಿತಳನ್ನು ಮದುವೆಯಾಗಿರುವುದು ತಿಳಿಯದು. ತಿಳಿಯಕೂಡದೆಂದು ನಾನೇ ಸುಮ್ಮನಿದ್ದುಬಿಟ್ಟೆ. ನನ್ನನ್ನು ಅಲ್ಲಿಗೇ ಬರ ಬೇಕೆಂದು ಒತ್ತಾಯಪಡಿಸುತ್ತಿದ್ದಾನೆ. ನಾವಿಬ್ಬರೂ ನೇರಿನಲ್ಲಿ ಹೋಗಿ ಅವನನ್ನು ಬೆರಗುಗೊಳಿಸಬೇಕೆಂದಿದ್ದೇವೆ?"

—ಎಂದರು.

"ನಿಮ್ಮ ತಿದ್ದುಪಡಿಯ ಬಗ್ಗೆ ಹೇಳಲಿಲ್ಲವಲ್ಲ"

—ಎಂದೆ ನಾನು.

"ಬರ್ಮಾ ಹೋಗುವುದಕ್ಕೆ ಮೊದಲು ಮದರಾಸಿನಲ್ಲಿ ಒಂದು ತಿಂಗಳು

ನಿಲ್ಲಬೇಕು. ಇದೇ ನನ್ನ ತಿದ್ದುಪಡಿ. ತಿದ್ದುಪಡಿಯು ಅಂಗೀಕರಿಸಲ್ಪಟ್ಟು ತಿರುವಳ್ಳಿಕ್ಕೇಣಿಯಲ್ಲಿ ಒಂದು ಮನೆಯೂ ನೋಡಿಯಾಯಿತು. ಈ ವಾರದ ಕೊನೆಯಲ್ಲಿ ಮದರಾಸಿಗೆ ಹೊರಡಬೇಕು."

"ಅಲ್ಲಿಂದ ನೇರವಾಗಿ ಬರ್ಮಾಗೆ ಹೋಗುತ್ತೇವೆ"

—ಎಂದಳು ಲಲಿತ.

"ಅಹುದು; ಮದರಾಸಿನ ಸಮುದ್ರ ಗಾಳಿಯ ತಂಪನ್ನು ಬರ್ಮಾಗೆ ಹೋದಮೇಲೆ ಹೇಗೆ ಅನುಭವಿಸಲು ಸಾಧ್ಯ? ಆದ್ದರಿಂದಲೇ ಸಮುದ್ರ ತೀರಕ್ಕೆ ಪಕ್ಕದಲ್ಲೇ ಮನೆಯನ್ನು ನೋಡಿದ್ದೇನೆ."

—ಎಂದರು ನಾರಾಯಣಸ್ವಾಮಿ.

ಆದಕ್ಕೆ ಮೇಲೆ ಅಲ್ಲಿರಲು ನನಗೆ ಹಿಡಿಸಲಿಲ್ಲ. ಹಟಾತ್ತೆಂದು ಮಾತಿನ ಮಧ್ಯೆ ಎದ್ದು ಬರುವುದೂ ಸಾಧ್ಯವಿಲ್ಲ. ಅವರ ತೀರ್ಮಾನವು ನನ್ನ ನರನಾಳಗಳಲ್ಲಿ ಮಿಂಚಿನಂತೆ ಹೊಕ್ಕಿತು. ಈ ತಲ್ಲಣವನ್ನು ಅವರು ಅರಿತುಕೊಳ್ಳದ ಇರಬೇಕಲ್ಲ ಎಂದು ಅಂಜಿದೆ. ಆದರೆ ನನ್ನ ಮುಖವು ನನ್ನನ್ನು ತೋರಿಸಿ ಕೊಟ್ಟು ಬಿಟ್ಟಿತು.

"ಏನು ಒಂದು ರೀತಿ ಇದ್ದೀರಿ?"

—ಎಂದರು.

"ಏನೂ ಇಲ್ಲ; ತಲೆ ನೋಯುತ್ತಿದೆ"

—ಎಂದೆ.

"ಆರೋಗ್ಯವನ್ನು ನೋಡಿಕೊಳ್ಳಿ. ನಿಮಗೆ ಪದೇ ಪದೇ ತಲೆನೋವು ಬರುತ್ತದೆ."

"ಸ್ವಲ್ಪ ಕ್ಷಮಿಸಬೇಕು. ನಾನು ಹೋಗಿ ಬರುತ್ತೇನೆ"

—ಎಂದು ಹೇಳಿ ಪ್ರತ್ಯುತ್ತರಕ್ಕೂ ಕಾಯದೆ ಬಿರಬಿರನೆ ಅಲ್ಲಿಂದ ನಡೆದೆ. ಮಹಡಿಯ ಮೆಟ್ಟಲುಗಳನ್ನು ನಾನು ಇಳಿಯುತ್ತಿರುವಾಗ,

"ಸೋಮೂ!"

—ಎಂದು ಅವರು ಕೂಗುತ್ತಿರುವ ಧ್ವನಿ ಕೇಳಿಸಿತು. ಅದನ್ನು ನಾನು ಕಿವಿಯಲ್ಲಿ ಹಾಕಿಕೊಳ್ಳದೆ ಆ ಮನೆ ಬಿಟ್ಟು ಹೊರಗೆ ನಡೆದೆ.—ಇನ್ನು ಮೇಲೆ ಇಲ್ಲಿಗೆ ಬರಲೇ ಬಾರದು! ಈ ಒಂದು ವಾರದ ಮಟ್ಟಿಗೆ ಈ ಕಡೆಗೇ ತಿರುಗಿ ನೋಡದಿದ್ದರೆ ನಂತರ ಜೀವಿಸಿರುವತನಕ ಇಲ್ಲಿಗೆ ಬರುವ ಹಾಗಿಲ್ಲ. ಮೊದಲು ಮದರಾಸು, ನಂತರ ಬರ್ಮಾ, ಅದರ ನಂತರ ಕಣ್ಣಿಗೆ ಕಾಣಿಸದ ಆ ಪ್ರಪಂಚ....

ಗೆಳೆತನವೆಂಬುದು ಒಂದು ಇಲ್ಲದೆ ಹೋಗಿದ್ದರೆ ಅಗಲುವಿಕೆ ಎಂಬ ವೇದನೆಯನ್ನು ಮನುಷ್ಯನು ಏಕೆ ಅನುಭವಿಸಬೇಕು? ಲಲಿತ ಹೊರಟು ಹೋಗುತ್ತಾಳೆಯೆ!

ಲಲಿತ ಹೊರಟು ಹೋಗುತ್ತಾಳೆ! ಹಗಲೂ ರಾತ್ರಿ ಇದೇ ನೆನಪು ನನ್ನನ್ನು ಕಾಡಿಸತೊಡಗಿತು. ನಿಮಿಷಗಳು ಕಳೆಯುವುದೇ ಅಸಾಧ್ಯ ವಾಯಿತು; ಒಂದೊಂದು ದಿನವೂ ಒಂದೊಂದು ಯುಗವಾಯಿತು. ಬೇಗನೆ ಅವರು ಹೋಗಿಬಿಡುವುದಿಲ್ಲವೆ ಎಂದು ಕಾತರದಿಂದ ಅವರು ಹೋಗುವುದನ್ನೇ ಕಾಯತೊಡಗಿದೆ. ಚಿತ್ರವಧೆಯನ್ನನುಭವಿಸುತ್ತಿರುವ ಅಪರಾಧಿ ತನ್ನ ಶರೀರದಲ್ಲಿ ಚೈತನ್ಯವಿರುವ ತನಕ ತಾನೇ ಆ ಬಾಧೆಯನ್ನು ಅನುಭವಿಸು ತ್ತಾನೆ? ಪ್ರಾಣವೇ ಹೊರಟು ಹೋದರೆ ಶರೀರವನ್ನು ಕುರಿತ ಚಿಂತೆ ಅವನಿಗೇಕೆ?

ಲಲಿತಳು ಹೊರಡುತ್ತಿದ್ದಳು!

ಶರೀರವನ್ನು ಬಿಟ್ಟು ಪ್ರಾಣಪಕ್ಷಿ ಹಾರಿಹೋಗುತ್ತಿದೆ.

ಅವರು ಮದರಾಸಿಗೆ ಹೊರಡುವ ಆ ಕೊನೆಯ ದಿನ ಬಂತು. ಮಧ್ಯಾಹ್ನ ಡ್ರೈವರನ ಹತ್ತಿರ ಒಂದು ಚೀಟಿ ಕಳುಹಿಸಿ ಅವಶ್ಯವಾಗಿ ನನ್ನನ್ನು ಮನೆಗೆ ಬರಬೇಕೆಂದು ಕರೆದಿದ್ದರು ನಾರಾಯಣಸ್ವಾಮಿ.

ನಾನು ಹೊರಟೆ.

ಗೆಳೆಯರ ಮನೆ ಸಂಭ್ರಮದಿಂದ ಕೂಡಿತ್ತು. ಆಳುಗಳು ಚುರುಕಿ ನಿಂದ ಸಾಮಾನುಗಳನ್ನು ಲಾರಿಗೆ ತುಂಬುತ್ತಿದ್ದರು. ಲಲಿತಳ ಅತ್ತೆ ಪದ್ಧತಿ

ಯಂತೆ ಅಲ್ಲಿಂದಿಲ್ಲಿಗೆ ತಿರುಗಾಡುತ್ತ, ಆಳುಗಳನ್ನು ಮೇಯಿಸುತ್ತಿದ್ದಳು. ಅವರ ಗಂಡನ ಮುಖ ಮಾತ್ರ ಕಳೆಗುಂದಿತ್ತು.

ನಾರಾಯಣಸ್ವಾಮಿಯವರು ಒಳಗೆ ಯಾವುದೋ ಕೆಲಸದ ಮೇಲಿದ್ದರು. ಅವರಿಗಾಗಿ ಹೊರಗಿನ ಕೊಠಡಿಯಲ್ಲಿ ನಾನು ಕಾಯುತ್ತಿದ್ದೆ. ನನ್ನ ಹೃದಯದಲ್ಲಿ ಖಾಲಿ ಮಾಡುತ್ತಿರುವ ಆ ಮನೆಯನ್ನು ಕಂಡ ತಕ್ಷಣ ಒಂದು ಬಗೆಯಾದ ಶೂನ್ಯವು ಆವರಿಸಿತ್ತು. ಲಲಿತಳ ಅತ್ತೆಯೂ, ಮಾವನೂ ಅಲ್ಲೇ ಇರುತ್ತಾರೆ. – ಯಾರಿದ್ದರೇನು, ಇಲ್ಲದಿದ್ದರೇನು ? ಲಲಿತಳು ಇರುವುದಿಲ್ಲ !

ಬಾಗಿಲು ತೆರೆಯಿತು. ಲಲಿತ ಒಳಗೆ ಬಂದಳು. ಎದುರಿನಲ್ಲಿದ್ದ ಮೇಜೆಯನ್ನು ಹಿಡಿದುಕೊಂಡೇ ನನ್ನನ್ನು ಮೌನದಿಂದ ನೋಡಿದಳು.

“ಈ ನಾಲ್ಕು ದಿನಗಳೊಳಗೆ ನಿಮ್ಮನ್ನು ಗುರ್ತೇ ಹಿಡಿಯಲಾಗಲಿಲ್ಲ. ನೀವು ಬಹಳ ಕೃಶರಾಗಿ ಹೋಗಿದ್ದೀರಿ. ನಿಮ್ಮ ಮೈಗೆ ಏನಾಗಿದೆ ?”

—ಎಂದಳು.

“ಇದೇ ಪ್ರಶ್ನೆಯನ್ನು ನಾನು ನಿಮಗೆ ಕೇಳಬಹುದೇ ?”

—ಎಂದೆ.

ಅವಳು ಉತ್ತರಿಸಲಿಲ್ಲ. ಅವಳ ದೃಷ್ಟಿ ಕೆಳಕ್ಕೆ ಬಾಗಿತು. ಮುಗುಳ್ನಗಲು ಪ್ರಯತ್ನಿಸಿದಳು.

ಒಂದು ಕ್ಷಣ ಕಳೆಯಿತು.

“ನೀವೇಕೆ ಹೀಗೆ ನಿಮ್ಮನ್ನೇ ದಂಡಿಸಿಕೊಳ್ಳುತ್ತಿದ್ದೀರಿ ? ಇದು ನನಗೆ ಸ್ವಲ್ಪವೂ ಅರ್ಥವಾಗುತ್ತಿಲ್ಲ”

—ಎಂದಳು.

“ಅರ್ಥವಾಗದೆ ಇರುವುದೇ ಒಳ್ಳೆಯದು. ಇನ್ನು ಒಂದು ಗಂಟೆ ಹೊತ್ತಿನವರೆಗೆ ಅರ್ಥವಾಗದೆ ಇದ್ದುಬಿಟ್ಟರೆ, ಆಮೇಲೆ ಎಂದೆಂದಿಗೂ ಅದನ್ನು ಅರ್ಥಮಾಡಿಕೊಳ್ಳಬೇಕಾದ ಪ್ರಸಂಗವೇ ಬರುವುದಿಲ್ಲ. – ನೀವು ಹೊರಡುವ ವೇಳೆಯಾಯಿತಲ್ಲವೇ ?”

“ಹೊರಡುವ ವೇಳೆ....!”

ಅವಳು ನಿಟ್ಟುಸಿರು ಬಿಟ್ಟಳು.

"ಅಗಲುವ ವೇಳೆ ಬಂದುಹೋಯ್ತು; ನಿಮಗೆ ಹೇಳಿಬಿಟ್ಟು ಹೋಗೋಣವೆಂದೇ ಬಂದೆ. ಹೋಗಿ ಬರಲೇ?"

'ಹೋಗಿ ಬನ್ನಿ'

—ಎಂದು ಹೇಳುವುದಕ್ಕೆ ಬಾಯಿ ತೆಗೆದೆ. ಪದಗಳು ಗಂಟಲಿನೊಳಗೇ ಸಿಕ್ಕಿಕೊಂಡವು. ಮನಸ್ಸಿನ ಕ್ಲೇಶವು ಅವಳಿಗೆ ತಿಳಿಯಬಾರದೆಂಬುದಕ್ಕಾಗಿ ಬಾಯನ್ನು ಮುಚ್ಚಿಕೊಂಡೆ.

"ಹೋಗಿ ಬರಲೇ?"

—ಎಂದಳು ಮತ್ತೆ.

"ಅಂದು ನನ್ನ ಕೊಠಡಿಯಲ್ಲಿ ನಿಮ್ಮನ್ನು ನಾನು ಕೋಪದಲ್ಲಿ ಹೇಳಿದುದನ್ನೆಲ್ಲ ಮರೆತುಬಿಡಿ. ನಿಮ್ಮ ಮನಸ್ಸನ್ನು ಬಹಳ ನೋಯಿಸಿಬಿಟ್ಟೆ. ಪ್ರೀತಿಸಿದ್ದಕ್ಕಾಗಿ ಕಠೋರವಾಗಿ ನಡೆದುಕೊಂಡೆ. ನನ್ನನ್ನು ಕ್ಷಮಿಸಿಬಿಡಿ."

"ನೀವೇ ನನ್ನನ್ನು ಕ್ಷಮಿಸಬೇಕು. ಅಕ್ಷಮ್ಯ ಅಪರಾಧವನ್ನು ಮಾಡಿದವಳು ನಾನು"

—ಎಂದು ಹೇಳಿ, ಒಂದು ಕ್ಷಣ ಸುಮ್ಮನಿದ್ದು,

"ನನಗಾಗಿ ನೀವು ಒಂದು ಕೆಲಸ ಮಾಡುತ್ತೀರಾ?"

—ಎಂದಳು.

"ಏನು?"

"ಮದರಾಸಿನಲ್ಲಿ ಒಂದು ತಿಂಗಳಿದ್ದುಬಿಟ್ಟೇ ನಾವು ಬರ್ಮಾಗೆ ಹೋಗುತ್ತೇವೆ. ಬರ್ಮಾಗೆ ಹೊರಡುವ ಮುನ್ನ ನೀವು ಖಂಡಿತ ಒಂದು ಸಲ ಮದರಾಸಿಗೆ ಬರಬೇಕು. ಅವರಿಗೆ ಹೇಳಿ ಬರೆಸುತ್ತೇನೆ."

"ಇಲ್ಲ; ಬೇಡಿ."

"ಒಂದು ಸಲ ಬನ್ನಿ; ಒಂದೇ ಒಂದು ದಿನ...."

"ಬೇಡ; ಇನ್ನು ನಾವು ಸಂಧಿಸಲೇ ಬೇಕಿಲ್ಲ!"

"ಸೋಮೂ!"

"..........."

"ನಿಮ್ಮನ್ನು ಮತ್ತೆ ಒಂದು ಬಾರಿ ಕಾಣದೆ ನಾನು ಬರ್ಮಾಗೆ ಹೋಗಲು ಸಾಧ್ಯವಿಲ್ಲ."

"ಸಂಧಿಸದಿದ್ದರೆ?"

"ಸಮುದ್ರವನ್ನು ದಾಟುಯುಲ್ಲವೇ ಹಡಗಿನಲ್ಲಿ ಹೋಗುವುದು. ಸಮುದ್ರದ ನೀರು ನಿಮಗಿಂತಲೂ ಕರುಣೆಯುಳ್ಳದ್ದು. ಯಾರನ್ನೂ ಸಂಧಿಸು ವುದಿಲ್ಲವೆಂದು ಅದು ಹೇಳುವುದಿಲ್ಲ."

ಆ ಕೊಠಡಿಯ ಛಾವಣಿ ಹಾಗೇ ಕಳಚಿಕೊಂಡು ನನ್ನ ತಲೆಯ ಮೇಲೆ ಬೀಳುತ್ತಿರುವ ಹಾಗಾಯಿತು ನನಗೆ.

ನೀರು ತುಂಬಿದ ಕಣ್ಣುಗಳಿಂದ ಅವಳು ಕೈಜೋಡಿಸಿ ವಂದಿಸಿದಳು.

"ಹೋಗಿ ಬನ್ನಿ"

—ಎಂದೆ.

ಅವಳು ಹೊರಗೆ ಹೋಗುವುದಕ್ಕೂ ಗೆಳೆಯರು ನಾರಾಯಣಸ್ವಾಮಿ ಒಳಗೆ ಬರುವುದಕ್ಕೂ ಹೊತ್ತು ಸರಿಯಾಗಿತ್ತು. ಎದುರಿನಲ್ಲಿ ಕುಳಿತು ನನ್ನ ಭವಿಷ್ಯತ್ತಿನ ವಿಷಯವಾಗಿ ಕೆಲವು ಮಾತುಗಳು ಹೇಳಿದರು. ಆಗಾಗ್ಗೆ ಕಾಗದ ಬರೆಯುತ್ತಿರಬೇಕೆಂದರು. ಅನಂತರ ಕಾಫಿ, ಫಲಹಾರಗಳು ಬಂದವು. ತೆಗೆದುಕೊಂಡೆವು.

ನನ್ನನ್ನು ಪ್ರೀತಿಯಿಂದ ತಬ್ಬಿ ಅಪ್ಪಣೆ ಪಡೆದುಕೊಂಡರು. ಕಾರು ಸಿದ್ಧವಾಗಿ ನಿಂತಿತ್ತು. ಕಾರಿನೊಳಕ್ಕೆ ಲಲಿತ ಮೊದಲೇ ಹತ್ತಿದ್ದಳು. ನಾರಾಯಣಸ್ವಾಮಿಯವರೂ ಅವಳ ಪಕ್ಕದಲ್ಲಿ ಕುಳಿತ ಮೇಲೆ ಕಾರು ಹೊರಟಿತು.

ಕಾರು ಹೋಗಿಬಿಟ್ಟಿತು.

ಆ ಕಾರು ಧೂಳನ್ನೆಬ್ಬಿಸಿ, ಅದನ್ನು ನನ್ನ ಕಣ್ಣುಗಳಲ್ಲೂ, ಭಾವನೆಗಳಲ್ಲೂ ಎರಚಿಬಿಟ್ಟು ವೇಗದಿಂದ ಓಡಿ ಮರೆಯಾಯ್ತು. ಶಿಲಾಮೂರ್ತಿಯಂತೆ ಅಲ್ಲಿ ನಾನು ನಿಂತೆ. ಎಷ್ಟೊತ್ತು ನಿಂತೆನೋ ತಿಳಿಯದು. ನನ್ನನ್ನು ನೋಡಿ ಲಲಿತಳ ಅತ್ತೆ ಅಪಹಾಸ್ಯ ಮಾಡಿ ನಗುವವರೆಗೂ, ಆ ಮನೆಯ ಆಳುಗಳು ನನ್ನನ್ನು ಹೀನವಾಗಿ ನೋಡಿ ನಗುವವರೆಗೂ ನಿಂತಿರಬಹುದು.

ಅವರು ಹೋಗಿಬಿಟ್ಟರು.—ಲಲಿತ ಹೋಗಿಬಿಟ್ಟಳು!

ಲಲಿತ ಹೋಗಿಬಿಟ್ಟಳು! ಇನ್ನು ನನ್ನ ಹೃದಯವನ್ನು ನಿಮಗೆ ತೆರೆದು ತೋರಿಸಬಹುದು. ಅವಳು ಈಗ ಇಲ್ಲಿಲ್ಲ. ಆದ್ದರಿಂದ ಅವಳಿಗೆ ಹೇಳದೆ ಮರೆಸಿಟ್ಟ ರಹಸ್ಯವನ್ನು ನಿಮ್ಮ ಬಳಿ ಹೇಳುತ್ತೇನೆ. ಅವಳಿಗೆ ಮಾತ್ರವೇನು? ನಾನೇ ಅರಿತುಕೊಳ್ಳದೆ ಇದ್ದ ಸತ್ಯ ಅದು! ಅದನ್ನು ಇದುವರೆಗೆ ಎಲ್ಲರ ಬಳಿಯೂ ಮರೆಸಿದೆ. ಇನ್ನು ಆ ರಹಸ್ಯವನ್ನು ರಕ್ಷಿಸಲು ನನ್ನಿಂದ ಸಾಧ್ಯವಿಲ್ಲ. ಹೃದಯವು ಅದರೊಳಗಿನ ಭಾವನೆಗಳ ಕಾವನ್ನು ತಡೆಯಲಾರದೆ ಸಿಡಿದುಹೋಗುವ ಹಾಗಿದೆ. ಆದ್ದರಿಂದ ಅದು ತಾನಾಗಿ ಸಿಡಿದು ಚೂರುಚೂರಾಗುವ ಮೊದಲೇ, ನಾನಾಗೇ ನಿಮ್ಮ ಬಳಿ ಅದನ್ನು ಒಡೆದು ತೋರಿಸುತ್ತೇನೆ.

ನಾನು ಅವಳನ್ನು ಪ್ರೇಮಿಸಿದೆ!

ನಾನು ಅವಳನ್ನು ಪ್ರೇಮಿಸಿದೆ.—ಅವಳ ಸೌಂದರ್ಯವನ್ನು ನೋಡಿಯಲ್ಲ; ಅವಳಿಗಿಂತಲೂ ಎಷ್ಟೋ ಸುಂದರಿಯರನ್ನು ನಾನು ಪಡೆಯಲಾಗುತ್ತದೆ. ಅವಳ ವಿದ್ಯೆಗಾಗಿಯಲ್ಲ; ಓದಿದ ಹುಡುಗಿಯರ ವಿಪರೀತಾಚರಣೆ ನನಗೆ ಹಿಡಿಸುವುದಿಲ್ಲ. ಅವಳ ಹಣಕ್ಕಾಗಿಯಲ್ಲ; ಹಣವನ್ನು ಹೆಣ್ಣಿನ ಮೂಲಕ ಗಳಿಸ ಬಯಸುವ ಹೇಡಿಯಲ್ಲ ನಾನು.

ನಾನು ಅವಳನ್ನು ಪ್ರೇಮಿಸಿದೆ.—ಅವಳ ಪ್ರೀತಿಯ ಆಗರವಾದ ಹೃದಯಕ್ಕಾಗಿ, ಆ ಹೃದಯದಲ್ಲಿ ನಾನು ಕಂಡ ಶೋಕವೇ ಮೂರ್ತಿ

ವೆತ್ತಂತಿದ್ದ ಸೊಗಸಿಗಾಗಿ, ಆ ಹೃದಯವು ಅಡಗಿಸಿಟ್ಟಿದ್ದ ಅಪಾರ ಕಲೆಯ ಸೊಬಗಿಗಾಗಿ! ಅವಳ ಕಣ್ಣುಗಳಲ್ಲಿ ಪ್ರತಿಬಿಂಬಿಸಿದ ಬಯಕೆ ನನ್ನ ಕಲ್ಪನೆಗೂ, ಸ್ಫೂರ್ತಿಗೂ ಉಗಮ ಸ್ಥಾನವಾಗಿತ್ತು; ಭೂಮಿಯಲ್ಲಾಗಲಿ, ಬಾನಿನಲ್ಲಾಗಲಿ, ಗಾಳಿಯಲ್ಲಾಗಲಿ, ಸಮುದ್ರದಲ್ಲಾಗಲಿ ಕಾಣದ ಕನಸುಗಳನ್ನೆಲ್ಲಾ ನಾನು ಅದರಲ್ಲಿ ಕಂಡೆ. ಬಾಳಲರಿತ ಅವಳು, ಬಾಳ ಬಯಸಿ ಕಾತರಿಸಿದ ಅವಳು, ಬಾಳಲಾರದೆ ಮೌನವಾಗಿ ನರಳಿದ ಆ ನರಳಾಟದಿಂದ ನನ್ನ ಹೃದಯವನ್ನು ಗೆದ್ದುಕೊಂಡಿದ್ದಳು.

ಅವಳು ನನ್ನ ಗೆಳೆಯರ ಹೆಂಡತಿ. ಹೆಂಡತಿ ಎಂಬ ಉನ್ನತ ಸ್ಥಾನದ ಬಾಧ್ಯತೆ ಮಾನ್ಯತೆಗಳನ್ನು ನಾನು ಚೆನ್ನಾಗಿ ಬಲ್ಲೆ. ನನ್ನ ಗೆಳೆಯರು ನಾರಾಯಣಸ್ವಾಮಿಯ ಬಗ್ಗೆ ನಾನು ಹೆಚ್ಚು ತಿಳಿದಿಟ್ಟಿದ್ದೆ. ಮನುಷ್ಯನೆಂಬ ರೀತಿಯಲ್ಲಿ ನನ್ನಲ್ಲಿ ಎಷ್ಟೋ ಕುಂದುಕೊರತೆಗಳಿರಬಹುದು. ಆದರೆ ಒಂದನ್ನು ಮಾತ್ರ ಹೇಳಬಯಸುತ್ತೇನೆ. ದ್ರೋಹಚಿಂತನೆಯಿಲ್ಲದವನು ನಾನು. ನನಗಾಗದವರಿಗೂ ಸಹ ನಾನು ದ್ರೋಹ ಬಗೆಯಲಿಲ್ಲ. ಇನ್ನು ಗೆಳೆಯರು ನಾರಾಯಣಸ್ವಾಮಿಯವರ ಜೀವನಕ್ಕೆ ಕೇಡಕನ್ನು ಎಣಿಸುವಷ್ಟು ಅಧಮನೇ? ಆ ಬಗೆಯ ನೆನಪೇ ನನ್ನನ್ನು ಅಲ್ಲಕಲ್ಲೋಲಗೊಳಿಸುತ್ತದೆ.

ನೀವು ನನ್ನನ್ನು ಅರ್ಥಮಾಡಿಕೊಂಡಿರೆ? ನಿಮ್ಮ ಅನುತಾಪವು ನನಗೆ ಬೇಕಿಲ್ಲ. ಆದರೆ ಒಬ್ಬ ಮನುಷ್ಯನು ಮಾಡಿದ್ದು ತಪ್ಪೆಂದು ತೀರ್ಮಾನಿಸುವ ಮೊದಲು ಒಂದು ಸಲಕ್ಕೆ ಹತ್ತು ಸಲ ಯೋಚಿಸಿ ನೋಡಿರಿ. ಆ ಪರಿಸ್ಥಿತಿಯಲ್ಲಿ ನೀವೋ, ನಿಮಗೆ ಬೇಕಾದ ಬೇರೆ ಯಾರೋ ಇದ್ದರೆ ಏನು ಮಾಡಬಹುದು ಎಂಬುದನ್ನೂ ಯೋಚಿಸಿ ನೋಡಿ.—ಕಾಡಿಗೆ ಓಡಿಹೋಗಿ, ತಪಸ್ಸು ಮಾಡುವುದರಲ್ಲಿ ನನಗೆ ನಂಬಿಕೆಯಿಲ್ಲ. ದೀರ್ಘಕಾಲ ತಪಸ್ಸು ಮಾಡಿ ಗಳಿಸಿದ ತಪೋ ಮಹಿಮೆಯೆಲ್ಲವನ್ನು ಒಂದು ಅಂಗನೆಯ ಕಡೆಗಣ್ಣೋಟಕ್ಕೆ ಮರುಳಾಗಿ ಕ್ಷಣಾರ್ಧದಲ್ಲಿ ಕಳೆದುಕೊಂಡ ವಿಶ್ವಾಮಿತ್ರನ ಕತೆ ನನಗೆ ಗೊತ್ತು. ಹೃದಯ ಭಾವನೆಯನ್ನು ಅದುಮಿ ಹಿಡಿಯಲು ನನಗೆ ಅಭ್ಯಾಸವಿಲ್ಲ; ಆ ಭಾವನೆಗಳೇ ನನ್ನ ಜೀವನ; ಕಲ್ಪನೆಯೇ ನನ್ನ ದುಡಿಮೆ.—ಈಗ ಅವಳು ಇಲ್ಲದಿರುವುದರಿಂದ, ನನ್ನನ್ನು ಬಿಟ್ಟು ಎಂದೆಂದಿಗೂ ಅಗಲಿ

ಹೋಗಿರುವುದರಿಂದ, ಇನ್ನು ನಾನು ಅವಳನ್ನು ಕಾಣುವುದೇ ಇಲ್ಲವೆಂದು ದೃಢನಿಶ್ಚಯ ಮಾಡಿರುವುದರಿಂದ ನಾನು ಇದನ್ನು ನಿಮಗೆ ಧೈರ್ಯದಿಂದ ಹೇಳುತ್ತೇನೆ: ನಾನು ಅವಳನ್ನು ಪ್ರೇಮಿಸಿದೆ! ಯಾರನ್ನು ಪ್ರೇಮಿಸ ಕೂಡದು.ಎಂದು ಸುತ್ತಲಿನ ಜಗತ್ತು ಕಟ್ಟಳೆಯಿಂದಲೂ, ಸಂಪ್ರದಾಯ ದಿಂದಲೂ ಮುಳ್ಳಿನ ಬೇಲಿಯನ್ನು ಹಾಕಿದೆಯೋ ಅವಳನ್ನು ಪ್ರೇಮಿಸಿದೆ....

## ೧೪

ಎರಡು ದಿನಗಳು ಕಳೆದವು.

ಜ್ವರವೇಗದಲ್ಲಿ ಕಾದಂಬರಿ ಬೆಳೆಯುತ್ತಿತ್ತು. ಆ ಕಾದಂಬರಿಯನ್ನು ನಾನು ಬರೆಯಲು ತೊಡಗದೆ ಇದ್ದಿದ್ದರೆ ಈ ವೇಳೆಗೆ ನಾನು ಯಾವ ಸ್ಥಿತಿಯಲ್ಲಿರುತ್ತಿದ್ದೆನೋ ತಿಳಿಯದು. ನನ್ನ ಚಿಂತೆ, ಕಣ್ಣೀರು, ದುಃಖ ಎಲ್ಲವನ್ನೂ ಈ ಕಾದಂಬರಿ ಮರೆಯುವಂತೆ ಮಾಡುತ್ತಿದೆ. ಇದನ್ನು ಬರೆಯಲು ಕುಳಿತಾಗ ನನಗೆ ಬೇರೆ ಯಾವ ನೆನಪುಗಳೂ ಉಳಿಯುವುದಿಲ್ಲ. ಆಗ ಒಂದು ದಿನ ಸಂಧ್ಯಾ ಸಮಯದಲ್ಲಿ, ಸಂಜೆಗತ್ತಲಾವರಿಸುತ್ತಿರುವಾಗ ಸಮುದ್ರ ತೀರದಲ್ಲಿ ನಾನೂ ಲಲಿತಳೂ ಒಟ್ಟಿಗೆ ಕುಳಿತು, ಒಬ್ಬರನ್ನೊಬ್ಬರು ನೋಡಿ ಈ ಜಗತ್ತನ್ನೇ ಮರೆತೆವಲ್ಲಾ ಆ ಬಗೆಯ ಅನುಭವವನ್ನೇ ನನಗೆ ಈ ಕಾದಂಬರಿ ನೀಡುತ್ತಿತ್ತು.

ಜಾನಕಿರಾಮು ಕೆನ್ನೆಯ ಮೇಲೆ ಕೈಯಿಟ್ಟುಕೊಂಡು ಕೊಠಡಿಯ ಹೊರಗಡೆ ಕುಳಿತಿದ್ದನು. ಈ ಚಿಕ್ಕ ವಯಸ್ಸಿನಲ್ಲೇ ಇಷ್ಟು ಚುರುಕುತನ, ಸಂಜ್ಞೆಯರಿತು ನಡೆಯುವ ಗುಣ, ಪ್ರಾಮಾಣಿಕತೆ ಇವೆಲ್ಲವೂ ಅವನಲ್ಲಿರುವುದು ನನ್ನ ಅದೃಷ್ಟವೆನ್ನಬೇಕು. ನನಗೆ ಯಾವ ಯಾವ ರೀತಿಯಲ್ಲಿ ಸಹಾಯ ಮಾಡಬೇಕು ಎಂಬುದನ್ನು ಅವನು ವಿಶದವಾಗಿ ತಿಳಿದುಕೊಂಡಿ

ದ್ದನು. ನನ್ನ ಬಗ್ಗೆ ಋು ಚಿಂತೆ ನನಗೆ ಅನೇಕವಾಗಿ ಬರುವುದಿಲ್ಲವೆಂಬುದನ್ನು ತಿಳಿದ ಅವನು, ಆ ಹೊಣೆಗಾರಿಕೆಯನ್ನು ಪೂರ್ಣವಾಗಿ ವಹಿಸಿಕೊಂಡನು.

ಗಡಿಯಾರವನ್ನು ನೋಡಿದೆ. ಗಂಟೆ ಒಂಭತ್ತಾಗಿತ್ತು. ಹತ್ತು ಗಂಟೆಗೆಲ್ಲಾ ಆಫೀಸ್ ಹೊತ್ತು. ಬರೆಯುತ್ತಿದ್ದ ಕಾದಂಬರಿಯ ಅಧ್ಯಾಯವನ್ನು ಮುಗಿಸಿ, ಅಂದಿನ ಪತ್ರಿಕೆಯನ್ನು ತಿರುವಿಹಾಕತೊಡಗಿದೆ.

"ಯಜಮಾನರು ಬಂದಿದ್ದಾರೆ"

—ಎಂದು ಜಾನಕಿರಾಮ ತಿಳಿಸಿದ.

"ಬರಹೇಳು"

—ಎಂದೆ.

ಹಾಗೆ ಹೇಳಿಬಿಟ್ಟು ನಾನೇ ಅವರನ್ನು ಬರಮಾಡಿಕೊಳ್ಳಲು ಎದ್ದು ಹೋದೆ.

ಪತ್ರಿಕಾಕರ್ತ ರಾಮಲಿಂಗಂರವರು ಮೌನದಿಂದಲೇ ಒಳಗೆ ಬಂದರು. ಅವರ ಮುಖವು ಏನೋ ಒಂದು ರೀತಿಯಾಗಿತ್ತು. ತೀವ್ರವಾದ ಯೋಚನೆಯಲ್ಲಿ ಇರುವವರ ಹಾಗೆ ಗೋಚರಿಸಿದರು. ಬಂದವರು ನನ್ನನ್ನು ತಲೆಯೆತ್ತಿ ನೋಡದೆಯೇ ಕುರ್ಚಿಯಲ್ಲಿ ಕುಳಿತರು. ತಲೆಯನ್ನು ತಗ್ಗಿಸಿಕೊಂಡೇ,

"ನಿಮ್ಮ ಹತ್ತಿರ ಕೆಲವು ವಿಷಯಗಳು ಏಕಾಂತದಲ್ಲಿ ಮಾತನಾಡಬೇಕಾಗಿದೆ"

—ಎಂದರು.

ಜಾನಕಿರಾಮ ಹೊರಗೆ ಹೋಗಿಬಿಟ್ಟ. ನಾನು ಅವರಿಗೆ ಎದುರಿನಲ್ಲಿ ಕುಳಿತು ಅವರ ಕೈಗಳಲ್ಲಿದ್ದ ಕಾಗದಗಳನ್ನೂ ಪತ್ರಿಕೆಗಳನ್ನೂ ಗಮನಿಸಿದೆ. ಅವರು ಬಂದಿರುವುದರ ಉದ್ದೇಶವು ನನಗೆ ಒಂದು ವಿಧವಾಗಿ ಸ್ಪಷ್ಟವಾಯಿತು.

"ಇವೆಲ್ಲವನ್ನೂ ಸ್ವಲ್ಪ ಓದಿ ನೋಡಿ"

—ಎಂದು ನನ್ನ ಕೈಗೆ ಕೊಟ್ಟರು.

ನಾನು ತೆಗೆದುಕೊಂಡು ಓದಿದೆ. ಸೇತುರಾಮನ ಪತ್ರಗಳು ಹಲವು ಹೆಸರುಗಳಲ್ಲಿ, ಹಲವು ವಿಧವಾಗಿ ಬರೆಯಲ್ಪಟ್ಟಿದ್ದುವು. ಅವುಗಳ ಜೊತೆಗೆ ದೇಶದಲ್ಲಿ ಇತ್ತೀಚೆಗೆ ಕಾಣಿಸಿಕೊಂಡಿರುವ 'ಸತ್ಯಸಂಭವ'ವನ್ನೇ ಪ್ರಕಟಿಸುವ ಪತ್ರಿಕೆಗಳು ಎರಡೂ, ನನ್ನ ಬಗ್ಗೆ ಸಂಕ್ಷೇಪವಾಗಿ 'ಎಚ್ಚರಿಕೆ'ಯನ್ನು ನೀಡಿದ್ದ ಒಂದು ಹಳದಿ ಪತ್ರಿಕೆಯೂ ಇದ್ದುವು. ನಾನು ಅವುಗಳನ್ನು ಹಾಗೇ ನೋಡಿಬಿಟ್ಟು ಅವರಿಗೇ ಹಿಂದಿರುಗಿಸಿ ಕೊಟ್ಟೆ.

ಅವರು ಆರಂಭಿಸಿದರು:

"ನಡತೆ ತಪ್ಪಿದವರು ಈ ದೇಶದಲ್ಲಿ ಉಪದೇಶ ಮಾಡಿ ಜೀವಿಸಲು ಸಾಧ್ಯವಿಲ್ಲ. ಅಯೋಗ್ಯರು ಇಲ್ಲಿ ಜ್ಞಾನವಂತರಾಗಿರುವುದಕ್ಕೆ ಆಗದು. ಮನುಷ್ಯನ ದಕ್ಷತೆಯನ್ನು ಪ್ರತ್ಯೇಕವಾಗಿಯೂ, ಶೀಲವನ್ನು ಪ್ರತ್ಯೇಕವಾಗಿಯೂ ವಿಂಗಡಿಸಿ ನೋಡುವುದು ಪಾಶ್ಚಾತ್ಯರ ಪದ್ಧತಿ. ನಮ್ಮ ದೇಶದಲ್ಲಿ ಜನರು ಆ ರೀತಿಯಿಲ್ಲ. ಸಾರ್ವಜನಿಕ ಜೀವನದಲ್ಲಿ ಭಾಗವಹಿಸುವ ಮನುಷ್ಯರೆಲ್ಲರೂ ಅವರ ಸ್ವಂತ ಜೀವನದಲ್ಲೂ ಸತ್ಯಸಂದರಾಗಿದ್ದರೇನೇ ಅವರನ್ನು ಸನ್ಮಾನಿಸುತ್ತಾರೆ.

"ನಿಜ"

—ಎಂದೆ ಶಾಂತವಾಗಿ.

"ನಾನೀಗ ನಿಮ್ಮನ್ನು ಕುರಿತೇ ಹೇಳುತ್ತಿದ್ದೇನೆ. ನೀವು ಒಂದು ಪ್ರಬಲ ಪತ್ರಿಕೆಯ ಸಂಪಾದಕರು. ನಿಮ್ಮ ಕತೆಗಳನ್ನು ಸಾವಿರಾರು ಜನರು ಓದಿ ಆನಂದಿಸುತ್ತಾರೆ. ನಿಮ್ಮನ್ನು ಅವರು ಮನುಷ್ಯರೆಂದು ಪರಿಗಣಿಸಬೇಕಲ್ಲವೇ?

ನಾನು ಬಾಯಿ ತೆಗೆಯದೆ ಸುಮ್ಮನಿದ್ದೆ.

"ಇದಕ್ಕೆ ನೀವು ಏನು ಹೇಳುತ್ತೀರಿ?"

—ಎಂದರು ರಾಮುಲಿಂಗಂ.

"ಹೇಳುವುದಕ್ಕೆ ಏನೂ ಇಲ್ಲ; ನೀವೇ ಹೇಳಿ?"

—ಎಂದೆ.

"ಏನೂ ಇಲ್ಲವೇ? ವಯಸ್ಸಿನಲ್ಲಿ ಕಿರಿಯರಾದರೂ ಹೊಣೆಗಾರಿ ಯನ್ನರಿತವರೆಂದು ಭಾವಿಸಿದ್ದೆ."

"ನಾನೇನು ಮಾಡಬೇಕು?–ಅದನ್ನು ಹೇಳಿ."

"ನಿಮಗೂ ಆ ಕುಟುಂಬಕ್ಕೂ ಇರುವ ಸಂಬಂಧವನ್ನು, ನಿಮ ಭವಿಷ್ಯತ್ತಿನ ಹಿತಕ್ಕಾಗಿಯೂ, ನನ್ನ ಸಂಸ್ಥೆಯ ಗೌರವವನ್ನು ಉಳಿಸುವು ಕ್ಕಾಗಿಯೂ ನೀವು ಕಡಿದುಕೊಳ್ಳಬೇಕಾಗಿದೆ."

ನನ್ನ ಮೈಯೆಲ್ಲವೂ ಕಾವೇರಿತು ನಾರಾಯಣಸ್ವಾಮಿಯ ಕುಟುಂಬವು ಈ ಊರನ್ನು ಬಿಟ್ಟು ಹೋಗಿದ್ದು ಇನ್ನೂ ಅವರಿಗೆ ತಿಳಿಯದು ನಾನೂ ಅದನ್ನು ಅವರಿಗೆ ತಿಳಿಸಲಿಲ್ಲ.

"ಕಡಿದುಕೊಳ್ಳದಿದ್ದರೆ

—ಎಂದೆ.

"ಯೋಚನೆಮಾಡಿ. ಭಾವನಾವಶರಾಗುವುದರಲ್ಲಿ ಫಲವಿಲ್ಲ. ಭಾವನ ಗಳ ಬಾಳು ಕ್ಷಣಿಕ."

"ನಾನು ಯಾವ ತಪ್ಪನ್ನೂ ಮಾಡಿಲ್ಲ. ನೀವು ನಂಬುತ್ತೀರೋ?"

"ನಾನು ನಂಬುವುದಿರಲಿ. ಲೋಕವು ನಂಬಬೇಕಲ್ಲ!"

"ಲೋಕವನ್ನು ಕುರಿತ ಚಿಂತೆ ನನಗಿಲ್ಲ."

"ನಾನು ಚಿಂತಿಸಬೇಕಾಗಿದೆ. ಲೋಕವು ನನ್ನ ಪತ್ರಿಕೆಯನ್ನು ಕಾಸು ಕೊಟ್ಟು ಕೊಳ್ಳುತ್ತಿದೆ. ನಾನು ಪತ್ರಿಕೆಯ ಮಾಲಿಕ."

"ಅದಕ್ಕಾಗಿ?"

"ಪತ್ರಿಕೆ–ಅಥವಾ ನಿಮ್ಮ ಪ್ರೇಯಸಿ!"

ನನ್ನ ಪ್ರೇಯಸಿ! ಅವರು ಇದನ್ನು ಉಚ್ಚರಿಸಿದ ರೀತಿ ನನ್ನನ್ನು ಬೆರಗುಗೊಳಿಸಿತು. ನನಗೆ ಇನ್ನು ತಾಳ್ಮೆಯಿಂದ ಮಾತನಾಡಲು ಸಾಧ್ಯ ವಿಲ್ಲದೆ ಹೋಯಿತು.

"ಪತ್ರಿಕೆಯನ್ನು ನೀವು ಒಪ್ಪಿಸಿಕೊಳ್ಳಬಹುದು"

—ಎಂದೆ.

ಕ್ರೋಧದಿಂದ ನನ್ನ ಮೈ ನಡುಗುತ್ತಿತ್ತು.

ಅವರು ಕುರ್ಚಿಯಿಂದೆದ್ದು, ಅದನ್ನು ಬಲವಾಗಿ ಒಂದು ಕಡೆಗೆ ದಬ್ಬಿದರು.

"ಅವಸರದಲ್ಲಿ ಹೇಳಿಬಿಟ್ಟಿರಿ. ಶಾಂತವಾಗಿ ಯೋಚಿಸಿ ಒಂದು ವಾರದಲ್ಲಿ ಉತ್ತರ ಹೇಳಿ"

—ಎಂದರು.

"ಆಗಲೂ ಇದೇ ಉತ್ತರವೇ"

—ಎಂದೆ.

"ಸೋಮೂ! ನಿಮ್ಮನ್ನು ಒಳ್ಳೆಯ ಹುಡುಗನೆಂದು ತಿಳಿದಿದ್ದೆ."

"ನಡತೆ ತಪ್ಪಿದ ಅಯೋಗ್ಯ ಹೇಗೆ ಒಳ್ಳೆಯವನಾಗಿರಲು ಸಾಧ್ಯ?"

—ಎಂದು, ಪ್ರಾರಂಭದಲ್ಲಿ ಅವರು ಸುತ್ತಿ ಬಳಸಿಕೊಂಡು ಹೇಳಿದ್ದ ಮಾತುಗಳನ್ನು ಈಗ ಅವರಿಗೇ ತಿರುಗಿಸಿ ಹೇಳಿದಾಗ ಅವರಿಗೆ ಕೋಪವು ಮಿತಿಮೀರಿತು. ಅವರ ಮೈಯೂ ಕ್ರೋಧದಿಂದ ಕಂಪಿಸಿತು.

"ಅಹುದು, ಇವತ್ತೇ ನಿಮ್ಮ ಲೆಖ್ಖವನ್ನು ತೀರಿಸಿಕೊಳ್ಳಿ!"

—ಎಂದು ಹೇಳಿ ಹೊರಗೆ ನಡೆದರು.

ರಾಮಲಿಂಗಂರವರಂಥಾ ಅನುಭವಶಾಲಿಗಳಿಗೆ ಚಾತುರ್ಯದಿಂದ ಮಾತನಾಡಲು ತಿಳಿದಿದ್ದುದು ಹೆಚ್ಚಲ್ಲ. ಈಗೆಲ್ಲಾ ಬಾಲಬೋಧೆಯನ್ನು ಓದುವ ಹುಡುಗರೂ ಕೂಡ ಜ್ಞಾನಿಗಳ ನುಡಿಕಟ್ಟುಗಳನ್ನು ಕಂಠಪಾಠ ಮಾಡಿ ಜಾಣ್ಮೆಯಿಂದ ಒಪ್ಪಿಸುತ್ತಾರೆ. ನನಗೆ ಅವರು ಹೆದರಿದ ಆ ಲೋಕದ ಜ್ಞಾಪಕ ಬಂತು. ಲೋಕವು ಬಾಳಲರಿಯದವರಿಗಾಗಿ ಮೊಸಳೆ ಕಣ್ಣೀರಿಡುತ್ತದೆ; ಬಾಳಬಯಸುವವರಿಗೆ ಅಡ್ಡಿಯಾಗಿ ನಿಲ್ಲುತ್ತದೆ.

ಅವರು ತಂದಿದ್ದ ಕಾಗದಗಳೂ ಪತ್ರಿಕೆಗಳೂ ನನ್ನೆದುರಿನಲ್ಲಿ ಮೇಜೆಯ ಮೇಲಿದ್ದವು. ಪತ್ರಿಕೆಗಳೇ ಅವು? ನಮ್ಮ ಸಂಸ್ಕೃತಿಯ ಮಟ್ಟವು ಹೀಗೆ

ಹಾಳಾಗಿ ಹೋಗುವುದೆಂದು ಯಾರೂ ಕನಸಿನಲ್ಲೂ ಭಾವಿಸಿರಲಿಲ್ಲ. ಇ
ವರ್ಷಗಳ ಕೆಳಗೆ ನಮ್ಮ ದೇಶವನ್ನು ಬಿಟ್ಟು ಹೊರಗೆ ಹೋದವರು ಯಾ
ದರೂ ಒಬ್ಬರು ಇಂದು ಮರಳಿ ಬಂದು ನಗರದ ಬೀದಿಯ ಕೊನೆಯಲ್ಲಿರ
ಒಂದು ಚಿಲ್ಲರೆ ಅಂಗಡಿಯ ಮುಂದೆ ನಿಂತರೆ ಸಾಕು. ಆ ಅಂಗಡಿಯ
ನೇತಾಡುವ ಪ್ರಕಟನೆಗಳ ಪ್ರಚಾರ ಪತ್ರಗಳ, ಹೊದಿಕೆಯ ಚಿತ್ರಗ
ಹೊರಗಿನ ನೋಟವೇ ಸಾಕು. ಅವು ಅವರಿಗೆ ನಮ್ಮ ನಾಡಿನಲ್ಲಿ ಬೆಳೆ
ಬರುತ್ತಿರುವ ಅನಾಗರಿಕ ಸಾಹಿತ್ಯವನ್ನು ಕುರಿತು ಬಗೆಬಗೆಯಾ
ಹೇಳುತ್ತವೆ.

ಹನ್ನೆರಡು ಗಂಟೆಗೆಲ್ಲಾ ನನ್ನ ಮೇಜಿನ ಮೇಲೆ ಸಂಬಳದ ಹಣವನ
ಎಣಿಸಿಬಿಟ್ಟು ಲೆಖ್ಖವನ್ನು ತೋರಿಸಿದರು ಮ್ಯಾನೇಜರ್. ಸಹಸಂಪಾದ
ಶಂಕರನ್‌ರವರನ್ನು ಕರೆದು, ಅರ್ಧಂಬರ್ಧ ಬಿಟ್ಟಿದ್ದ ಕೆಲಸಗಳ ವಿವರಗಳನ
ತಿಳಿಸಿ, ಸೂಚನೆಗಳನ್ನು ಕೊಟ್ಟೆ. ಅಂದು ರಾತ್ರಿಯೇ ಬೊಂಬಾಯಿ
ಹೋಗುವುದಾಗಿಯೂ ತಿಳಿಸಿದೆ. ಪತ್ರಿಕಾಲಯದಲ್ಲಿ ಅಂದು ಯಾರಿಗ
ಏನೂ ಕೆಲಸ ಮಾಡಲಾಗಲಿಲ್ಲ. ಮೇಲಿಂದ ಮೇಲೆ ನನ್ನನ್ನು ಬಂದ
ನೋಡಿದರು. ಇಬ್ಬರು ಮೂವರು ಒಟ್ಟಿಗೆ ತಮ್ಮತಮ್ಮಲ್ಲೇ ಮಾತನಾ
ಕೊಂಡರು. ಕೊನೆಯದಾಗಿ ಪತ್ರಿಕಾಲಯದ ಸಂಬಂಧವು ನನಗೆ ಅಂದ
ಸಂಜೆ ನಡೆದ ಟೀ ಪಾರ್ಟಿಯೊಂದಿಗೆ ಮಧುರವಾಗಿ ಕೊನೆಗೊಂಡಿತು.

ಕೊಠಡಿಯಲ್ಲಿ ನಾನೂ ಜಾನಕಿರಾಮನು ಮಾತ್ರ ಇದ್ದೆವು. ಜಾನ
ರಾಮ ಹಾಸಿಗೆಯನ್ನು ಸುರುಳಿಯಾಗಿ ಸುತ್ತಿ ಕಟ್ಟುತ್ತಿದ್ದನು. ಕೊಠ
ಯೊಳಗಿದ್ದ ನನ್ನ ಮುಖ್ಯವಾದ ವಸ್ತುಗಳೆಲ್ಲವೂ ಮೊದಲೆ ಪೆಟ್ಟಿಗೆಯೊಳಕ
ಹೋಗಿದ್ದವು. ನಾನು ಹೊರಡಲು ಸಿದ್ಧನಾಗಿ ನಿಂತೆ.

ಕೆಲಸವನ್ನು ಬಿಟ್ಟು ಹೋಗುವುದಕ್ಕಿಂತಲೂ ನನಗೆ ಆ ಕೆಲಸದ
ಮೂಲಕ ಲಭಿಸಿದ ಆಪ್ತ ವ್ಯಕ್ತಿಗಳನ್ನು ಬಿಟ್ಟು ಹೋಗುವುದೇ ಕಷ್ಟ
ವಾಗಿತ್ತು. ಸಹಸಂಪಾದಕ ಶಂಕರನ್‌ರವರ ಪ್ರೀತಿಯನ್ನೂ, ಜಾನಕಿರಾಮನ
ಸೇವೆಯನ್ನೂ ನನ್ನಿಂದ ಎಂದೆಂದಿಗೂ ಮರೆಯಲಾಗುವುದಿಲ್ಲ. ನಾನು ಕೆಲಸ

ವನ್ನು ಬಿಟ್ಟು ಹೋಗುತ್ತೇನೆ ಎಂಬ ಸಮಾಚಾರವನ್ನು ತಿಳಿದಾಗಿನಿಂದಲೂ ಜಾನಕಿರಾಮನ ಮುಖದಲ್ಲಿ ಕಳೆಯೇ ಇಲ್ಲ. ಮೇಲಿಂದಮೇಲೆ ನನ್ನನು ನೋಡಿ ನಿಟ್ಟುಸಿರು ಬಿಡುತ್ತಿದ್ದನು. ನಿರ್ವಿಣ್ಣನಾಗಿ ಯಂತ್ರದಂತೆ ನಡೆದು ಕೊಂಡನು. ಅವನಿಗೆಂದು ಅಂದು ನಾನು ತೆಗೆದುಕೊಟ್ಟ ಹೊಸ ಬಟ್ಟೆಗಳನ್ನು ತೆಗೆದುಕೊಳ್ಳಲು ಅವನಿಗೆ ಮನಸ್ಸೇ ಇಲ್ಲ. ಬಹಳ ಬಲವಂತದ ಮೇಲೆ ಅವನು ತೆಗೆದುಕೊಂಡನು.

ಮೊದಲೇ ನಾನು ಬೊಂಬಾಯಿಗೆ ಹೋಗಬೇಕೆಂದೆನಲ್ಲವೆ? ಆ ಮಿತ್ರರನ್ನು ಕಾಣಲು ಇದಕ್ಕಿಂತಲೂ ತಕ್ಕ ಸಂದರ್ಭವು ಬೇರೆ ಸಿಗುವುದಿಲ್ಲ. ಅಲ್ಲಿಗೆ ಹೋಗಿ ಅವರೊಡನೆ ಕೆಲವು ವಾರಗಳಾದರೂ ನೆಮ್ಮದಿಯಿಂದ ಇರಲು ಬಯಸಿದೆ. ಅಲ್ಲಿ ನಾನು ಯಾರೆಂಬುದು ಅವರನ್ನು ಬಿಟ್ಟರೆ ಬೇರೆ ಯಾರಿಗೂ ತಿಳಿಯದು. ಸೇತುರಾಮನ ಪತ್ರಗಳೂ, ಲೇಖನಗಳೂ ಅಲ್ಲಿಗೆ ನನ್ನ ಬೆನ್ನು ಹತ್ತಿದ ಬೇತಾಳದಂತೆ ಹಿಂಬಾಲಿಸುವುದಿಲ್ಲ. ಬೊಂಬಾಯಿ ನಗರದ ಹೊಸ ವಾತಾವರಣದಲ್ಲಿ, ಅದರ ಚಿತ್ರ ವಿಚಿತ್ರ ಜೀವನದ ಮಧ್ಯೆ ನನ್ನ ಮಿತ್ರರೊಂದಿಗೆ ನಾನು ಸಂಕಟವನ್ನು ಮರೆಯಬಹುದು.

ಒಳ್ಳೆಯ ಕಾಲಕ್ಕೆಂದು ಈಗ ಸ್ವಾಮಿನಾಥ ಊರಲ್ಲಿಲ್ಲ. ಕಾಂತ ಳೊಂದಿಗೆ ಸ್ವಗ್ರಾಮಕ್ಕೆ ಹೋದವನು ಹತ್ತು ಹದಿನೈದು ದಿನಗಳಾದರೂ ತಿರುಗಿ ಬರದೆ ಅಲ್ಲಿಯೇ ನಿಂತುಬಿಟ್ಟಿದ್ದನು. ಅವನು ಇಲ್ಲಿ ಇಲ್ಲದೆ ಹೋದುದು ನನಗೆ ಬಹಳ ಅನುಕೂಲವಾಯಿತು. ಅವನು ಮಾತ್ರ ಇಲ್ಲಿದ್ದರೆ, ನನಗೂ ಅವನ ಮಾವನವರಿಗೂ ಉಂಟಾಗಿರುವ ಮನಸ್ತಾಪವು ಅವನಿಗೆ ಧರ್ಮ ಸಂಕಟವಾಗಿ ಪರಿಣಮಿಸುತ್ತಿತ್ತು. ಗೆಳೆಯನೆಂದು ನನ್ನನ್ನು ವಹಿಸಿಕೊಂಡು ಮಾತನಾಡುವನೇ? ಅಥವಾ ಮಾವನ ಕಡೆ ನಿಜಾಂಶವಿದೆಯೆಂದು ನಂಬಿ ನನ್ನನ್ನು ತಿದ್ದಲು ಮೊದಲು ಮಾಡುವನೇ?

ರಾತ್ರಿ ಒಂಭತ್ತೂವರೆಗೆ ತಿರುಚಿಯಲ್ಲಿ ರೈಲು ಹತ್ತಿದೆ. ಬೀಳ್ಕೊಡಲು ಪತ್ರಿಕಾಲಯದ ಮಿತ್ರರು ಬಂದಿದ್ದರು. ಜಾನಕಿರಾಮನು ಬಿಕ್ಕಿ ಬಿಕ್ಕಿ ಅಳುತ್ತಿದ್ದನು. ಅವನನ್ನು ಗಮನಿಸಿಕೊಳ್ಳಲು ಶಂಕರನ್‌ರವರಿಗೆ ಹೇಳಿ

ಬಂದಿದ್ದೆ. ಸಣ್ಣ ವಯಸ್ಸಿನಲ್ಲೇ ಎಷ್ಟು ತೀವ್ರವಾದ ಪ್ರೀತಿ ಅರಳುತ್ತ
ಹೃದಯದಲ್ಲಿ !

ರೈಲು ಹೊರಟಿತು. ಮಿತ್ರರು ದೃಷ್ಟಿಯಿಂದ ಮರೆಯಾದರು. ಹಲ
ತಿಂಗಳು ನನಗೆ ಆಶ್ರಯವಿತ್ತಿದ್ದ ತಿರುಚ್ಚಿ ನಗರದ ಇರುಳಿನ ಭವ್ಯತೆಯನ
ಬಾಗಿಲ ಬಳಿ ನಿಂತು ನೋಡಿದೆ. ಊರಿನ ಮಧ್ಯೆ ದೊಡ್ಡ ನಂದಿ ವಿಗ್ರಹ
ಹಾಗೆ ಮಲಗಿದ್ದ ಆ ಗುಡ್ಡವನ್ನು ನೋಡಿದೆ. ಅದು ಗಂಭೀರವಾಗಿ ದೀಪ
ಬೆಳಕಿನಲ್ಲಿ ಕಾಣಿಸಿತು. ಆ ಗುಡ್ಡದ ಮಡಲಿನಲ್ಲಿ ನಾನು ಕೆಲವು ದಿನಗಳ
ಸಂಜೆಗಳನ್ನು ಹಾಯಾಗಿ ಕಳೆದಿದ್ದೇನೆ. ಒಂದೇ ಒಂದು ಸಲ ನಾನು
ನಾರಾಯಣಸ್ವಾಮಿ, ಲಲಿತ ಮೂವರೂ ಅದರ ತುದಿಯವರೆಗೆ ಹತ್ತಿ
ಹೋಗಿ, ಅಲ್ಲಿಂದ ನಾಲ್ಕು ಕಡೆಯೂ ಊರನ್ನು ಸುತ್ತ ನೋಡಿ ಆನಂ
ಸಿದ್ದೆವು.

ರೈಲು ವೇಗವಾಗಿ ಹೋಗುತ್ತಿತ್ತು. ನಾನು ಹತ್ತಿದ್ದ ಎರಡನೆಯ
ದರ್ಜೆಯ ಡಬ್ಬಿಯಲ್ಲಿ ನನ್ನನ್ನು ಬಿಟ್ಟರೆ ಬೇರೆ ಯಾರೂ ಇಲ್ಲ. ಕಿಟಕಿಯ
ಬಳಿ ಕುಳಿತುಕೊಂಡು ನಾನು ಏನೇನೋ ಯೋಚಿಸುತ್ತಿದ್ದೆ. ರೂಪ ತಾಳದ
ಹಲವು ಭಾವನೆಗಳು, ಸಾಧಿಸಲಸಾಧ್ಯವಾದ ಹಲವು ಯೋಜನೆಗಳು
ಹುಚ್ಚುಚ್ಚಾದ ಧ್ಯೇಯಗಳು, ಇಂಥಾ ಸಾವಿರಾರು ಸ್ಮರಣೆಗಳು ನನ್ನ
ಸ್ಮೃತಿ ಪಟಲದ ಮೇಲೆ ಹಾಯ್ದು, ಹೃದಯವನ್ನು ಕಲಕಿದವು. ನನಗೆ
ನಿದ್ದೆ ಬರಲಿಲ್ಲ.

ರಾತ್ರಿ ಎರಡು ಗಂಟೆಯಾಯ್ತು. ವಿಳುಪುರಂ ಸ್ಟೇಷನ್‌ನಲ್ಲಿ ಗಾಡಿ
ನಿಂತಿತು. ಇನ್ನೂ ನನಗೆ ನಿದ್ದೆ ಹತ್ತಿರಲಿಲ್ಲ. ಕುಳಿತುಕೊಳ್ಳುವ ಸ್ಥಳದಲ್ಲೆ
ಒರಗಿಕೊಂಡೂ, ಕೆಳಗೆ ಮಲಗಿಕೊಂಡೂ ಹಲವು ಸಲ ನಿದ್ದೆ ಹೋಗಲು
ಪ್ರಯತ್ನಿಸಿದೆ. ಸಾಧ್ಯವಾಗಲಿಲ್ಲ. ಕೊನೆಯದಾಗಿ ಹಾಸಿಗೆಯನ್ನು ಸುತ್ತಿಟ್ಟು
ಬಿಟ್ಟು, ನಾನು ಬರೆದಿದ್ದ ಕಾದಂಬರಿಯ ಹಸ್ತಪ್ರತಿಯನ್ನು ತೆಗೆದು ಓದ
ಲಾರಂಭಿಸಿದೆ.

ವಿಳುಪ್ಪುರಂ ಬಿಟ್ಟು ಗಾಡಿ ಹೊರಡುವ ಸಮಯ. ಅವಸರವಸರವಾಗಿ ಒಬ್ಬ ಪ್ರಯಾಣಿಕರು ಒಳಗೆ ನುಗ್ಗಿದರು. ಕೈಯಲ್ಲಿ ಒಂದು ಪತ್ರಿಕೆಯನ್ನು ಬಿಟ್ಟರೆ ಯಾವ ವಸ್ತುವೂ ಅವರ ಹತ್ತಿರ ಇರಲಿಲ್ಲ. ಅವರು ಹಾಕಿಕೊಂಡಿದ್ದ ಸೆಂಟಿನ ವಾಸನೆಯಿಂದ ನನಗೆ ಜ್ಞಾನತಪ್ಪಿ ಬೀಳುವ ಹಾಗಿತ್ತು. ನನ್ನೆದುರಿಗೆ ಬಂದು ಕುಳಿತು ಆಗಿಂದಾಗ್ಗೆ ತಮ್ಮ ಬೆಳ್ಳಿಯ ನಶ್ಯದ ಡಬ್ಬಿಯನ್ನು ತೆರೆದು ನಶ್ಯವನ್ನು ಹಾಕಿಕೊಂಡರು. ಅವರು ಹಾಕಿಕೊಂಡ ನಶ್ಯವು ಅವರ ಮೂಗನ್ನು ಹೊಕ್ಕಿತೋ ಇಲ್ಲವೋ, ಆದರೆ ಅದು ನನ್ನ ಶ್ವಾಸದಲ್ಲಿ ಬೆರೆಯಿತು.

ನನಗರಿಯದಲೆ ನಾನು ಕುಳಿತಿದ್ದ ಹಾಗೇ ಕಣ್ಣು ಮುಚ್ಚಿ ಗಾಢನಿದ್ರೆಯಲ್ಲಿ ಮುಳುಗಿದೆ. ಆ ನಿದ್ದೆಯ ಮಧ್ಯೆ ಒಂದೇ ಸಮನಾಗಿ ಕನಸುಗಳನ್ನು, ನಾನೆಂದೂ ಕಾಣದ ವೈಪರೀತ್ಯದ ಕನಸುಗಳನ್ನು ಕಾಣತೊಡಗಿದೆ. ಬಯಕೆಯ ಪ್ರತಿರೂಪವೆಂಬಂತೆ ಕನಸುಗಳು, ಬರೀ ಕನಸುಗಳು, ಕನಸು, ಕನಸು....

ಎಷ್ಟು ಹೊತ್ತು ಆಯಿತೋ ತಿಳಿಯದು.

“ಸಾರ್, ಟಿಕೆಟ್ !”

ತಾಂಬರಂ ಸ್ಟೇಷನ್ನಿನಿಂದ ರೈಲು ಹೊರಟಿತು. ಬೆಳಕು ಹರಿಯುವ ಹೊತ್ತು. ಪಕ್ಕದಲ್ಲಿ ಟಿಕೆಟ್ ಪರಿಶೋಧಕರು ನಿಂತಿದ್ದರು. ಅವರು ಅಲ್ಲಿ ಕೆಲವು ನಿಮಿಷಗಳಿಂದಲೂ ನನ್ನನ್ನು ಎಬ್ಬಿಸುವ ಪ್ರಯತ್ನದಲ್ಲಿ ತೊಡಗಿರಬೇಕೆಂದು ನನಗನಿಸಿತು. ಅರ್ಧ ನಿದ್ದೆಯಿಂದಲೇ ಅಂಗಿಯ ಜೇಬಿಗೆ ಕೈ ಹಾಕಿದೆ. ಅಲ್ಲಿ ಪರ್ಸ್ ಇರಲಿಲ್ಲ. ತಲ್ಲಡಿಸಿ ಹೋದೆ. ನೆಟ್ಟಗೆದ್ದು ಕುಳಿತೆ. ನನ್ನ ಎಡಗೈಯಲ್ಲಿದ್ದ ಕೈ ಗಡಿಯಾರವೂ ಕಾಣಲಿಲ್ಲ. ನನ್ನ ಹಾಸಿಗೆ, ಪೆಟ್ಟಿ, ಪೆನ್ನು ಒಂದೂ ಕಾಣಿಸಲಿಲ್ಲ. ಎಲ್ಲವೂ ಅದೃಶ್ಯವಾಗಿದ್ದುವು. ಹೆದರಿ ಸುತ್ತುಮುತ್ತಲೂ ನೋಡಿದೆ. ನನ್ನನ್ನೂ ಅವರನ್ನೂ ಬಿಟ್ಟರೆ ಆ ಕಂಪಾರ್ಟ್ಮೆಂಟಿನಲ್ಲಿ ಬೇರೆ ವ್ಯಕ್ತಿಯೋ ಅಥವಾ ವಸ್ತುವೋ ಇರಲಿಲ್ಲ. ನನ್ನ ಕಾದಂಬರಿಯು ಮಾತ್ರ ಕೆಳಗೆ ಬಿದ್ದಿತ್ತು.

ಕಾದಂಬರಿಯನ್ನು ಕಣ್ಣಿಂದ ಕಂಡ ಬಳಿಕ ನನಗೆ ಯಾವುದನ್ನೂ ಕಳೆದುಕೊಂಡ ಹಾಗೆ ತೋಚಲಿಲ್ಲ. ಅದನ್ನು ತೆಗೆದು ಭದ್ರವಾಗಿ ಮಡಿಸಿಟ್ಟೆ. ಬೇರೆ ಎಲ್ಲವೂ ಭದ್ರವಾಗಿದ್ದು ಆ ಕಾದಂಬರಿ ಮಾತ್ರ ಕಳೆದುಹೋಗಿದ್ದರೆ....?

"ಯಾವ ಊರಿಗೆ ಟಿಕೆಟ್ ಕೊಂಡಿದ್ದಿರಿ ?"

—ಎಂದರು ಪರಿಶೋಧಕರು.

"ಬೊಂಬಾಯಿ !"

"ಪರ್ಸನ್ನೂ ಕಳೆದುಕೊಂಡಿರೇನು !"

—ಎಂದು ಕೇಳಿ ಅವರು ನನ್ನನ್ನು ಅವಲೋಕಿಸಿದರು. ಅವರು ನನ್ನನ್ನು ಪ್ರಶ್ನಿಸಿದ ರೀತಿ, ಟಿಕೆಟ್ಟಿಲ್ಲದೆ ಪ್ರಯಾಣ ಮಾಡುವ ಅನುಭವ ಶಾಲಿಗಳನ್ನು ಪ್ರಶ್ನಿಸುವ ಹಾಗಿತ್ತು. ನನ್ನ ಮಾತುಗಳನ್ನು ಅವರು ತಕ್ಷಣ ನಂಬದೇ ಹೋದುದು ಆಶ್ಚರ್ಯವೇನಲ್ಲ. ನಾಗರಿಕರಂತೆ ಉಡುಪನ್ನು ಧರಿಸಿದ ಎಷ್ಟೋ ಮೋಸಗಾರರನ್ನೂ, ಠಕ್ಕರನ್ನೂ ಅವರು ನೋಡಿರುತ್ತಾರೆ.

"ಟಿಕೆಟ್ ಮಾತ್ರವಲ್ಲ; ನನ್ನ ಹಾಸಿಗೆ, ಪೆಟ್ಟಿ ಎಲ್ಲವೂ ಹೋಗಿ ಬಿಟ್ಟಿತು"

—ಎಂದೆ.

ಅನಂತರ ವಿಳುಪುರಂನಲ್ಲಿ ಹತ್ತಿದ ಪ್ರಯಾಣಿಕನನ್ನು ಕುರಿತೂ ಅದರ ನಂತರ ನಡೆದವುಗಳನ್ನೂ ವಿಶದವಾಗಿ ಹೇಳಿದೆ. ಅವರಿಗೆ ನನ್ನಲ್ಲಿ ವಿಶ್ವಾಸ ವುಂಟಾಯಿತು.

"ಮದರಾಸಿನಲ್ಲಿ ಇಳಿದು ಪೋಲೀಸಿಗೆ ದೂರು ಕೊಡೋಣ"

—ಎಂದರು.

ಜೇಬಿನಲ್ಲಿ ಬಿಡಿಗಾಸಿಲ್ಲದೆ ಬೆಂದ ಹೃದಯದಿಂದ ಕುಳಿತೆ. ಮದರಾಸಿನ ಎಳುಂಬೂರು ಸ್ಟೇಷನ್ ಬಂತು. ಇಳಿದೆ ರೈಲ್ವೆ ಪೋಲೀಸ್ ಇನ್ಸ್‌ಪೆಕ್ಟರ್ ನನ್ನನ್ನು ನಡೆದ ವಿಷಯಗಳೆಲ್ಲವನ್ನೂ ಕೇಳಿ ಬರೆಸಿಕೊಂಡರು. ಇಂತದೇ ಕಳ್ಳತನ ಸಮೀಪದಲ್ಲೇ ಇನ್ನೊಂದು ಕಡೆ ನಡೆದಿರುವುದಾಗಿಯೂ ಅವಶ್ಯ

ವಾಗಿ ಇದನ್ನು ಪತ್ತೆ ಹಚ್ಚಿಕೊಡುವುದಾಗಿಯೂ ಹೇಳಿದರು. ಎರಡು ಮೂರು ದಿನಗಳು ನಾನು ಮದರಾಸಿನಲ್ಲಿ ಒಬ್ಬ ಮಿತ್ರನ ಮನೆಯಲ್ಲಿರುತ್ತೇನೆಂದು ಹೇಳಿ, ಮೈಲಾಪೂರಿನಲ್ಲಿದ್ದ ಆ ಮಿತ್ರನ ಮನೆಯ ವಿಳಾಸವನ್ನು ಕೊಟ್ಟೆ.

ಬೆಳಗ್ಗೆ ಎಂಟು ಗಂಟೆಯಾಗಿತ್ತು. ಒಂದು ರೀತಿಯಾಗಿ ನನ್ನನ್ನು ಸ್ಟೇಷನ್ನಿನಿಂದ ಹೊರಗೆ ಬಿಟ್ಟರು. ಪಕ್ಕದಲ್ಲಿದ್ದ ನಲ್ಲಿಯಲ್ಲಿ ಹಲ್ಲುಜ್ಜಿ ಮುಖ ತೊಳೆದುಕೊಂಡೆ. ಆದರೆ ಕಾಫಿ ಕುಡಿಯಲಿಲ್ಲ. ಕಾಫಿ ಕುಡಿಯಲು ಕೈಯಲ್ಲಿ ಕಾಸು ಇರಬೇಕಲ್ಲ!

ಎಳುಂಬೂರು ಸ್ಟೇಷನ್ನಿಗೆದುರು ಸಾಲಿನಲ್ಲಿದ್ದ ಪೆಟ್ಟಿಯಂಗಡಿಗಳ ಪಕ್ಕದಲ್ಲಿ ಕಾಲುದಾರಿಯಲ್ಲಿ ಒಂದು ಕಡೆಗೆ ನಡೆದೆ. ಯಾರೋ ಒಬ್ಬ ನನ್ನ ಹೆಸರನ್ನು ಹಿಂದೆ ನಿಂತುಕೊಂಡು ಏರಿಸಿದ ಧ್ವನಿಯಲ್ಲಿ ಉಚ್ಛರಿಸಿದ ಹಾಗೆ ಕೇಳಿಸಿತು. ತಿರುಗಿ ನೋಡಿದೆ. ರಿಕ್ಷಾ ಎಳೆಯುವವನೊಬ್ಬನು ಬೀಡಿಯ ಹೊಗೆಯನ್ನು ಗಾಳಿಯಲ್ಲಿ ಬಿಡುತ್ತಾ, ಅವನ ಬಳಿ ನಿಂತಿದ್ದ ಇನ್ನೊಬ್ಬ ರಿಕ್ಷಾದವನಿಗೆ ಆ ಪೆಟ್ಟಿಯಂಗಡಿಯಲ್ಲಿ ನೇತಾಡಿದ ದೊಡ್ಡ ಪ್ರಕಟನ ಪತ್ರಿಕೆಯನ್ನು ತೋರಿಸುತ್ತಿದ್ದನು. ನಾನೂ ಆ ಪ್ರಕಟನ ಪತ್ರವನ್ನು ನೋಡಿದೆ. ಹಲವು ಬಾರಿ ಮತ್ತೆ ಮತ್ತೆ ನೋಡಿದೆ. ಕಣ್ಣುಗಳನ್ನುಜ್ಜಿಕೊಂಡು ನೋಡಿದೆ. ನನ್ನಿಂದ ಆ ಸ್ಥಳವನ್ನು ಬಿಟ್ಟು ಕದಲಲಾಗಲಿಲ್ಲ. ಎಷ್ಟೋ ಮಂದಿ ನನ್ನನ್ನು ತಾಕಿ ನೂಕಿಕೊಂಡು ವೇಗವಾಗಿ ನಡೆದು ಹೋದರು. ನಾನು ಮಾತ್ರ ಎಲ್ಲಿಗೂ ಹೋಗಲಿಲ್ಲ. ಅದೇ ಸ್ಥಳದಲ್ಲೇ ನಿಂತೆ.

ನನ್ನ ಹೆಸರು ದಪ್ಪ ದಪ್ಪ ಅಕ್ಷರಗಳಲ್ಲಿ ಆ ಪ್ರಕಟನ ಪತ್ರಿಕೆಯಲ್ಲಿ ಅಚ್ಚಾಗಿತ್ತು. ಮೊದಲೇ ನನಗೆ 'ಎಚ್ಚರಿಕೆ'ಯನ್ನು ಮಾಡಿದ್ದ ಪ್ರಬಲ ಹಿಂದಿ ಪತ್ರಿಕೆಯ ಪ್ರಕಟನ ಪತ್ರವದು.

ಎಷ್ಟೋ ಸಾರಿ ನನ್ನ ಹೆಸರನ್ನು ನಾನು ಪ್ರಕಟನ ಪತ್ರಗಳಲ್ಲಿ ನೋಡಿದ್ದೇನೆ. ಅದಕ್ಕಾಗಿ ನಾನು ಹೆಮ್ಮೆಪಟ್ಟಿದ್ದುಂಟು. ಇತರರು ಅದನ್ನು

ಓದಿ, ನಾನು ಪಕ್ಕದಲ್ಲಿರುವುದನ್ನು ಅರಿಯದೇ ನನ್ನನ್ನೂ, ನನ್ನ ಕತೆಗಳಿಗಾಗಿ ಹೊಗಳುವುದುಂಟು. ಆಗ ನನಗೆ ಉಂಟಾಗುವ ಆನಂದವು ಎಂಥಾದ್ದು ಗೊತ್ತೆ ?

ಆದರೆ ಇಂದು ? ನನ್ನ ಹೆಸರು ನನ್ನನ್ನು ಹುಚ್ಚನನ್ನಾಗಿ ಮಾರ್ಪಡಿಸಿತ್ತು. ನನ್ನನ್ನು ಹೊಗಳುವುದಕ್ಕಾಗಿ ನನ್ನ ಹೆಸರನ್ನು ಅದರಲ್ಲಿ ಹಾಕಿದ್ದಾರೇನು ? ನನ್ನನ್ನು ಗೌರವಿಸುವುದಕ್ಕಾಗಿಯೇ ನನ್ನ ಹೆಸರು ಗಾಳಿಯಲ್ಲಿ ಹಾರಾಡುತ್ತಿದೆಯೇನು ? – ಅಯ್ಯೋ ! ಆ ಅಂಗಡಿಯಲ್ಲೊಂದರಲ್ಲೇ ಅಲ್ಲದೆ, ಅಂಗಡಿಗೆ ಅಂಗಡಿ ಆ ಪ್ರಕಟನ ಪತ್ರ ನೇತಾಡುತ್ತಿದೆಯಲ್ಲ ! ನಾನು ನೋಡುವ ಎಲ್ಲ ಮನುಷ್ಯರೂ ಆ ಪತ್ರಿಕೆಯನ್ನು ಕೊಂಡು, ನನ್ನ ಹೆಸರನ್ನು ಓದಿ ನಗುತ್ತಾ ಹೋಗುತ್ತಿದಾರಲ್ಲಾ !

**" ಪತ್ರಿಕಾ ಸಂಪಾದಕ ಸೋಮುವಿನ ಹಗಲು ವೇಷ – ಸ್ವಾರಸ್ಯವಾದ ಕತೆಗಳನ್ನು ಬರೆಯುವವನ ಸ್ವಾರಸ್ಯಕರವಾದ ಸ್ವಂತ ಕತೆ !"**

೧೫

ಮೈಲಾಪೂರು ಮಿತ್ರನ ಮನೆ ಬೀಗಹಾಕಿತ್ತು. ಅಕ್ಕಪಕ್ಕದ ಮನೆಯವರನ್ನು ವಿಚಾರಿಸಿದೆ. ಸಂಸಾರ ಸಮೇತನಾಗಿ ಹೊರ ಊರಿಗೆ ಹೋಗಿ ಒಂದು ವಾರವಾಗಿತ್ತಂತೆ. ಯಾವಾಗ ಮರಳಿ ಬರುತ್ತಾನೆಂದು ಅವರಾರಿಗೂ ತಿಳಿಯದಂತೆ. ಇದನ್ನು ಕೇಳಿದ ನಂತರ ಮೊದಲೇ ಸಿಡಿಯುತ್ತಿದ್ದ ನನ್ನ ತಲೆಯ ಮೇಲೆ ಸುತ್ತಿಗೆಯಿಂದ ಹೊಡೆದ ಹಾಗಾಯಿತು. ಬೀಗ ಹಾಕಿದ್ದ ಬಾಗಿಲ ಮೇಲೆ ಒರಗಿ ಸ್ವಲ್ಪ ಹೊತ್ತು ವಿಶ್ರಾಂತಿ ತೆಗೆದುಕೊಂಡೆ. ಕೈ, ಕಾಲುಗಳು ಮೈಯೆಲ್ಲವೂ ಒಂದೇ ಸಮನೆ ನೋಯುತ್ತಿದ್ದವು. ಇನ್ನು ಒಂದು ಅಡಿಯೂ ಮುಂದೆ ಇಡಲಾರೆನೆಂದು ತೋರಿತು. ಮಿತ್ರನ ಮನೆಯ ಜಗಲಿಯ ಮೇಲೆ, ಒಂದು ವಾರದಿಂದ ಕಸ ಗುಡಿಸದೆ ಇದ್ದ ಆ ನೆಲದ ಮೇಲೆ ಮಲಗಿದೆ. ಬಹಳ ಹೊತ್ತು ಅಲ್ಲಿ ಮಲಗಿಕೊಂಡಿದ್ದೆ. ಎಳುಂಬೂರಿನಿಂದ ಮೈಲಾಪೂರಿನವರೆಗೆ ಬರೀ ಹೊಟ್ಟೆಯಲ್ಲಿ ನಡೆದು ಬಂದ ಬಳಲಿಕೆಯಿಂದಲೋ, ರಾತ್ರಿ ಉಂಟಾದ ಸಂಭವದಿಂದಲೋ, ಆ ಪತ್ರಿಕೆಯ ಪ್ರಕಟನ ಪತ್ರವನ್ನು ನೋಡಿ ನನ್ನ ಹೃದಯದಲ್ಲೇ ನಾನು ಬಹಳವಾಗಿ ನೊಂದುಕೊಂಡಿದ್ದರಿಂದಲೋ ಏನೋ, ನನ್ನ ಮೈಯೆಲ್ಲವೂ ಬೆಂಕಿಯಂತೆ ಸುಡುತ್ತಿತ್ತು.

ಮದರಾಸಿನಲ್ಲಿ ನನಗೆ ತಿಳಿದ ಇನ್ನೂ ಹಲವರಿದ್ದರು. ಆದರೆ ಅವರಾ

ರನ್ನೂ ನಾನು ಈ ಸ್ಥಿತಿಯಲ್ಲಿ ನೋಡುವಂತಿಲ್ಲ. ಕಾರಿನಲ್ಲಿ ಹೋದರೆ
ಅವರ ಮನೆಯ ಹೊರಬಾಗಿಲಿನ ಕಬ್ಬಿಣದ ಗೇಟನ್ನು ಅವರ ಮನೆಯ ಆ
ಗಳು ತೆರೆದುಬಿಡುತ್ತಾರೆ. ನನ್ನನ್ನು ಕಂಡು ಕೈ ಜೋಡಿಸಿ ವಂದಿಸುತ್ತಾ
ಇಲ್ಲದೆ ಹೋದರೆ, ಈ ಸ್ಥಿತಿಯಲ್ಲಿ ಹೋಗಿ ನಾನು ಅವರುಗಳ ಬಳಿ
ಜೋಡಿಸಿ ಬೇಡಿಕೊಂಡರೂ ನನಗೆ ಒಳಕ್ಕೆ ಪ್ರವೇಶಿಸಲು ಅಪ್ಪಣೆ ಸಿಗ
ದಿಲ್ಲ. ಹಾಗೆ ಒಂದು ವೇಳೆ ಸಿಕ್ಕಿದರೂ ಆ ಮನೆಯ ನನ್ನ ಮಿತ್ರ ನನ್ನೊ
ಮುಖಕೊಟ್ಟು ಮಾತನಾಡುವುದಿಲ್ಲ.

ನಾನು ಈಗ ಪತ್ರಿಕಾ ಸಂಪಾದಕ ಸೋಮು ಅಲ್ಲ; ಜೇಬಿನಲ್ಲಿ ಬ
ಗಾಸಿಲ್ಲದ ಭಿಕಾರಿ, ಬಡವ ಸೋಮು. ಪ್ರಖ್ಯಾತ ಬರಹಗಾರ ಸೋ
ನಲ್ಲ; ದುಃಖಪೀಡಿತ ಹೇಯ ಕಲಾವಿದ. ಜನರು ಇಂದು ನನ್ನನ್ನು ನ
ಮುಖದಿಂದ ಕರೆಸಿಕೊಂಡು, ಸತ್ಕರಿಸುವುದಿಲ್ಲ. ನನ್ನೆದುರಿನಲ್ಲೆ ನನ್ನ
ಬಾಯಿ ತುಂಬ ಹೊಗಳಿ ಹೆಮ್ಮೆಪಡುವುದಿಲ್ಲ. ನನ್ನ ಈ ದುಸ್ಥಿತಿಯ
ಮದರಾಸಿನ ಬೀದಿಬೀದಿಗಳಲ್ಲೆಲ್ಲಾ ನನ್ನ ಹೆಸರು ಭಂಗಪಡುತ್ತಿರ
ಪಾಡನ್ನು ಕಂಡ ನಂತರ ಇನ್ನು ನಾನು ಯಾರನ್ನಾದರೂ ಹುಡ
ಹೋಗಲು ಸಾಧ್ಯವೇ ? ದುಡ್ಡು ಮತ್ತು ದೊಡ್ಡಸ್ಥಿಕೆ ಇರುವವರಿಗೆ ತಾ
ಮದರಾಸು ಒಂದು ಸ್ವರ್ಗದಂತೆ ಇರುತ್ತದೆ. ಇತರರಿಗೆ ಅದು ಘೋ
ನರಕವೇ ತಾನೇ ?

ಒಂದೇ ಒಂದು ಸ್ಥಳಕ್ಕೆ ನಾನು ಹೋಗಬಹುದು. ಆ ಒಂದೇ ಒಂ
ಸ್ಥಳ ನನ್ನನ್ನು ಆಹ್ವಾನಿಸಿತು. ಆ ಮನೆಯ ಬಾಗಿಲನ್ನು ನಾನು ಯಾ
ಹೊತ್ತಿನಲ್ಲಾದರೂ ತಟ್ಟಬಹುದು. ನಾನು ಯಾವ ಸ್ಥಿತಿಯಲ್ಲಿದ್ದರೂ
ಮನೆಯ ಬಾಗಿಲು ನನಗಾಗಿ ತೆರೆಯುತ್ತದೆ. ಊರೆಲ್ಲವೂ ನನಗೆದುರಾ
ತಿರುಗಿ ಅಟ್ಟಿಸಿಕೊಂಡು ಬಂದರೂ ಆ ಮನೆ ನನಗೆ ಬಹಿರಂಗವಾಗೇ ಆಶ್ರ
ನೀಡಿ ರಕ್ಷಿಸುತ್ತದೆ. ಆದರೆ ನಾನು ಅಲ್ಲಿಗೆ ಹೋಗುವುದಿಲ್ಲ. ಹೋ
ವುದೇ ಇಲ್ಲ. ಎಂದೆಂದಿಗೂ ಹೋಗುವುದಿಲ್ಲ. ಎಂದಿಗೂ ತಿರುವಳ್ಳಿಕ್ಕೇ
ಯಲ್ಲಿರುವ ನನ್ನ ಮಿತ್ರರ ಮನೆಯ ಕಡೆಗೆ ಕಾಲಿಡುವುದಿಲ್ಲ. ನನ್ನಿಂ
ಅವರು ಅನುಭವಿಸಿದ ಸುಖವು ಸಾಲದೆ ?

ಸೂರ್ಯರಶ್ಮಿ ಜಗಲಿಯ ಮೇಲೆ ಬಿದ್ದು ನನ್ನ ಮುಖದ ಮೇಲೆ ಚುರ್ರೆಂದಿತು. ಅದಕ್ಕೆ ಮೇಲೆ ಅಲ್ಲಿ ಮಲಗಿರಲು ಆಗದೆ ಹೋಯಿತು. ಎದ್ದು ಮೆಲ್ಲಗೆ ನನ್ನ ಬಲವೆಲ್ಲವನ್ನೂ ಸೇರಿಸಿ ನಡೆಯತೊಡಗಿದೆ. ಯಾವ ಕಡೆಗೆ ನಡೆದೆನೆಂದೂ ತಿಳಿಯದು. ಕಾಲುಗಳು ಎಲ್ಲಿಗೋ ನಡೆದವು. ಚಪ್ಪಲಿ ಯಿಲ್ಲದ ಆ ಕಾಲುಗಳು ಉರಿಯುತ್ತಿರುವ ಟಾರ್ ರೋಡಿನ ಉರಿಯನ್ನು ತಡೆಯಲಾರದೆ ಒದ್ದಾಡುತ್ತಾ ತಮಗೆ ತೋಚಿದ ಹಾಗೆ ಗುರಿಯಿಲ್ಲದೆ ನಡೆದವು.

ಇಷ್ಟೆಲ್ಲಾ ಸಂಕಟಗಳ ಮಧ್ಯೆಯೂ ನಾನು ನನ್ನ ಕಾದಂಬರಿಯನ್ನು ಮರೆಯಲಿಲ್ಲ. ಅದು ನನ್ನ ಕೈಯಲ್ಲಿ ಭದ್ರವಾಗಿತ್ತು. ಬಿಸಿಲು ಸುಡು ತ್ತಿದ್ದರೂ ತಲೆಯಿಂದ ಬೆವರು ನೀರು ಸುರಿಯುತ್ತಿದ್ದರೂ, ಅದನ್ನು ಇಟ್ಟು ನನ್ನ ತಲೆಯನ್ನು ಬಿಸಿಲಿನಿಂದ ಮರೆಸಿಕೊಳ್ಳಲಿಲ್ಲ. ನನ್ನ ಮೈ ಮನಗಳೆಲ್ಲ ಕ್ಕಿಂತಲೂ ಮಿಗಿಲಾದುದು ಅದು. ಏಕೆ ಗೊತ್ತೇ? ಅದು ನನ್ನ ಕತೆ; ನನ್ನ ಲಲಿತಳ ಕತೆ! ನಮ್ಮ ಮೈ ಮನಸ್ಸುಗಳು ನಶಿಸಿ ಹೋದ ನಂತರವೂ ಸ್ಥಿರವಾಗಿ ನಿಲ್ಲುವಂತ ಆ ಪ್ರೀತಿಯ ರಸನಿಮಿಷಗಳ ಬಗ್ಗೆ ಅದರಲ್ಲಿ ನಾನು ಬರೆದಿದ್ದೆ. ಪ್ರೀತಿ ಅವಿನಾಶಿ ಎಂಬುದು ಸತ್ಯವಾದರೆ ನಮ್ಮ ಪ್ರೀತಿಗೂ ಅದೇ ಸ್ಥಾನ ಸಿಗುವುದು!

ಮೈಲಾಪೂರಿನ ಅಂಚಿನಲ್ಲಿ ಸಾಂತೋಂ ಸಮುದ್ರ ತೀರಕ್ಕೆ ಹೋಗುವ ಬೀದಿ ಅದು. ಎರಡು ಕಡೆಗಳಲ್ಲೂ ಬಡಜನರ ಗುಡಿಸಲುಗಳು ಇದ್ದುವು. ಸೊಂಟಕ್ಕೆ ಚಿಂದಿಗಳನ್ನುಟ್ಟು, ಆ ಬೀದಿಯ ಮಕ್ಕಳು ಬೆಂಕಿಯಂತೆ ಸುಡು ತ್ತಿರುವ ಆ ಬಿಸಿಲನ್ನೂ ಲಕ್ಷಿಸದೆ ಆಟವಾಡುತ್ತಿದ್ದರು. ಮೂರು ವರ್ಷದ ಮಗುವೊಬ್ಬನು ವೇಗವಾಗಿ ಬಂದು ನನ್ನನ್ನು ತಾಕಿ ಕೆಳಗೆ ಬಿದ್ದನು. ಮೆಲ್ಲಗೆ ಬಾಗಿ ಅವನನ್ನು ಮೇಲಕ್ಕೆತ್ತಿದೆ. ಅವನ ಬೆನ್ನಿನ ಮೇಲಿದ್ದ ಮಣ್ಣನ್ನು ಒರೆಸಿದೆ. ಅವನ ಕಣ್ಣುಗಳಲ್ಲಿ ಸ್ಪಷ್ಟವಾಗಿ ಕಾಣಿಸಿದ ದಿಗಿಲು! ಹಾಗೇ ಅವನನ್ನು ಅಪ್ಪಿಕೊಳ್ಳೋಣವೆನಿಸಿತು. ಒಬ್ಬನು ಬಡವನಾಗಿ ಮಾರ್ಪಟ್ಟ ನಂತರವೇ ಬಡವರ ಸ್ಥಿತಿಗಳನ್ನು ಚೆನ್ನಾಗಿ ಅರ್ಥಮಾಡಿಕೊಳ್ಳುವುದಕ್ಕೆ ಸಾಧ್ಯ.

ಅವನನ್ನು ಕೆಳಗೆ ಬಿಟ್ಟು ಮುಂದಕ್ಕೆ ನಡೆದೆ. ನನ್ನಿಂದ ನಡೆಯ
ಲಾಗಲಿಲ್ಲ. ಪಕ್ಕದಲ್ಲಿ ಬೀದಿಯ ನಲ್ಲಿಯ ಬಳಿ ಆ ಬೀದಿಯ ಹೆಂಗಸರ
ಜಗಳವಾಡುತ್ತಿದ್ದರು. ಕೈಯಿಂದ ಸನ್ನೆಮಾಡಿ, ನೀರು ಬೇಕೆಂದೆ. ಜಗ
ನಿಂತಿತು. ನನಗೆ ದಾರಿ ಬಿಟ್ಟರು. ನಲ್ಲಿಯಲ್ಲಿ ಮುಖವನ್ನು ತೊಳೆದ
ಕೊಂಡು, ಹೊಟ್ಟೆ ತುಂಬುವಷ್ಟು ನೀರನ್ನು ಕುಡಿದೆ.

ಹತ್ತು ಅಡಿಗಳ ದೂರದಲ್ಲಿ ಸಣ್ಣ ತೆಂಗಿನ ತೋಟ ಕಾಣಿಸಿತು
ಅಲ್ಲಿಗೆ ಹೋಗಿ ಆ ನೆರಳಿನಲ್ಲಿ ಮತ್ತೆ ಮಲಗಿದೆ. ಹಾಗೆ ಮಲಗುವಾಗ ನನ
ಮೊಟ್ಟಮೊದಲ ಬಾರಿಗೆ ಸಾವಿನ ನೆನಪು ಬಂತು. ಮಲಗಿದ್ದ ಹಾಗೇ, ನಿದ್ದ
ಹೋಗುತ್ತಿರುವ ಸ್ಥಿತಿಯಲ್ಲೇ ಕೆಲವು ಸತ್ತುಹೋದ ಮನುಷ್ಯರನ್ನು, ಬೀದಿ
ಯಂಚುಗಳಲ್ಲಿ ನಾನು ಈ ನಾಗರಿಕ ಯುಗದಲ್ಲಿ ನೋಡಿದ್ದೇನೆ. ಉಪವಾಸ
ಮರಣಗಳಿಗೆ ಹೆಸರುವಾಸಿಯಾದ ದೇಶವಲ್ಲವೇ ನಮ್ಮದು?

ಆ ತೆಂಗಿನ ತೋಪಿನ ನೆರಳು ನನ್ನ ಹಾಗೇ ಇನ್ನೂ ಹಲವರಿಗೆ
ಮೊದಲೇ ಆಶ್ರಯ ನೀಡಿತ್ತು. ಕುಂಟರು, ಕುರುಡರು, ರೋಗಿಗಳು
ಮುಂತಾಗಿ ಹಲವು ಭಿಕ್ಷುಕ ಸಂಸಾರಗಳನ್ನ ಅಲ್ಲಿ ಕಂಡೆ. ಕೆಲವರು ಮಲಗಿ
ದ್ದರು; ಕೆಲವರು ಕುಳಿತಿದ್ದ ಹಾಗೇ ಒಬ್ಬರನ್ನೊಬ್ಬರು ಅವಾಚ್ಯ ಶಬ್ದಗಳಿಂದ
ಬೈದುಕೊಳ್ಳುತ್ತಿದ್ದರು; ಕೆಲವರು ಮರದಡಿಗಳಲ್ಲಿ ಕಲ್ಲುಗಳಿಂದ ಒಲೆಗಳನ್ನು
ಮಾಡಿ ಅದರ ಮೇಲೆ ಗಂಜಿ ಕಾಯಿಸುತ್ತಿದ್ದರು.

ಮದರಾಸು ನಗರದಲ್ಲಿ 'ಪಾರಿಸ್ ಕಾರ್ನರ್' ಪಕ್ಕದಲ್ಲಿದ್ದ ದೊಡ್ಡ
ದೊಡ್ಡ ಕಟ್ಟಡಗಳೂ, ಭವನಗಳನ್ನೂ ಕುರಿತು ಯೋಚಿಸಿದೆ; ಮಾಂಬಲಂ,
ಆಡಯಾರುಗಳಲ್ಲಿದ್ದ ಬಂಗಲೆಗಳ ಬಗ್ಗೆಯೂ ಯೋಚಿಸಿದೆ; ನಗರ ಬೀದಿಗಳಲ್ಲಿ
ಸಾಲುಸಾಲಾಗಿ ಹೋಗುವ ಅಚ್ಚ ಹೊಸ ಕಾರುಗಳನ್ನೂ ಆ ಕಾರುಗಳಲ್ಲಿ
ಠೀವಿಯಿಂದ ಕುಳಿತು ಹೋಗುವ ಶ್ರೀಮಂತರನ್ನು ಕುರಿತೂ ಚಿಂತಿಸಿದೆ.
ಇಂಥಾ ಮದರಾಸು ನಗರದಲ್ಲೇ ನಾಡನ್ನು ಆಳುವ ನಾಯಕರೂ, ಸಾವಿರ
ಗಳ ಸಂಖ್ಯೆಯಲ್ಲಿ ಭಿಕ್ಷುಕರೂ ಇದ್ದಾರೆ!

ಮನುಷ್ಯನಿಗೆ ಎರಡು ಬಗೆಯ ಹಸಿವು. ದೇಹದ ಹಸಿವಿಗೆ ಅನ್ನ; ಮನಸ್ಸಿನ ಹಸಿವಿಗೆ ಪ್ರೇಮ. ಆದರೆ ದೇಹದ ಹಸಿವು ಇಲ್ಲದಿರುವವರಿಂದಲೇ ಹೃದಯದ ಹಸಿವನ್ನು ಅನುಭವಿಸಲು ಸಾಧ್ಯ. ನನಗೆ ಈಗ ಹೊಟ್ಟೆ ಹಸಿಯಿತು. ಹೊಟ್ಟೆಯಡಿಯಲ್ಲಿ ಯಾರೋ ಕರುಳನ್ನು ಹಿಂಡುವ ಹಾಗಿತ್ತು. ಹಸಿವು, ಹಸಿವು, ಒಂದೇ ಸಮನೆ ಹಸಿವು! ನನ್ನ ಸುತ್ತಲೂ ಹಸಿವಿನ ಪ್ರಳಯ ತಾಂಡವ. ಹಸಿದ ಲೋಕದ ಮಧ್ಯೆ ಸಿಕ್ಕಿ ನಾನು ನರಳಿದೆ.

ನಾನು ನನ್ನೊಳಗೇ ಪ್ರೇಮವನ್ನು ಮನಸ್ವೀ ಶಪಿಸಿದೆ. ಪ್ರೇಮ! ಆದು ಶ್ರೀಮಂತ ಬಂಗಲೆಗಳಲ್ಲಿ ಅವಿತುಕೊಂಡಿರುವ ಮಾಯಾಮೋಹಿನಿ! ಬಡವರಿಗೆ ಎಟುಕದ ಫಲವು ಅದು. ಅದು ಬರಿಯ ಕನಸು; ಬಿಸಿಲುಗುದುರೆ ಹೃದಯಕ್ಕೆ ಹುಚ್ಚು ಹಿಡಿಸುವ, ಅಮಲೇರಿಸುವ ಹೆಂಡವದು!

ಈ ಹಸಿವಿನಿಂದ ಮಾತ್ರ ಪಾರಾದೆನೆಂದರೆ, ಅನಂತರ ನನ್ನ ವಿಚಾರ ಶಕ್ತಿಯೆಲ್ಲವನ್ನೂ ಹಸಿವಿಗೆ ಇದಿರಾಗಿ ಉಪಯೋಗಿಸಬೇಕೆಂದು ಕಂಕಣ ತೊಟ್ಟೆ. ಪ್ರೇಮದ ಬಗ್ಗೆ ಕತೆಗಳನ್ನು ಬರೆದು, ಅವುಗಳು ಹಸಿವನ್ನು ಅನುಭವಿಸಿ ತಿಳಿಯದವರಿಂದ ಉತ್ತಮ ಸಾಹಿತ್ಯವೆಂದು ಹೊಗಳಿಸಿಕೊಳ್ಳುವುದಕ್ಕಿಂತಲೂ, ಒಂದೇ ಒಂದು ಮಾನವ ಪ್ರಾಣಿಯನ್ನಾದರೂ ಕ್ಷುದ್ಬಾಧೆಯಿಂದ ರಕ್ಷಿಸಿಬಿಟ್ಟು ನನ್ನ ಕತೆ ತಕ್ಷಣ ಮಣ್ಣು ಪಾಲಾದರು ಪರವಾಯಿಲ್ಲ. ಆದರೆ ನನ್ನೊಳಗೆ ಹತ್ತಿ ಉರಿಯುತ್ತಿರುವ ಈ ಹಸಿವು ನನ್ನನ್ನು ಮತ್ತೆ ಜೀವ ಸಹಿತ ಬಿಡುತ್ತದೆಂದು ನಾನು ನಂಬಲಿಲ್ಲ. ತನಗೆದುರಾಗಿ ಹೋರಾಡಬೇಕೆಂದಿರುವವನು ತನ್ನ ಮುಷ್ಟಿಯೊಳಗೆ ಸಿಕ್ಕಿ ನರಳುತ್ತಿರುವಾಗ ಸೇಡು ತೀರಿಸಿಕೊಳ್ಳದೆ ಅದು ಬಿಡುವುದುಂಟೆ?

ತೆಂಗಿನ ಮರಗಳ ನೆರಳು ಉದ್ದವಾಯಿತು. ತಿರುಕರ ಗುಂಪು ಸ್ವಲ್ಪ ಸ್ವಲ್ಪವಾಗಿ ಚೆದರಿತು. ನಾನೂ ಮೆಲ್ಲನೆದ್ದು ನನ್ನ ಕೊನೆಯಿಲ್ಲದ ನಡೆಯನ್ನು ಸಾಗಿಸಿದೆ. ಹೆಚ್ಚು ದೂರ ಬಂದಿರಲಿಲ್ಲ. ನಾನು ಬಂದ ಬೀದಿ ಸಮುದ್ರ ತೀರದ ಬಳಿ ಕೊನೆಗೊಂಡಿತು. ಆ ಸಮುದ್ರ ತೀರ. ಅದು ಯಾವ ಸಮುದ್ರ ತೀರ ಗೊತ್ತೇ? ಅಗೋ, ಆ ಹಳೆಯ ದೋಣಿ, ಅಗೋ

ಆ ಏಕಾಂತ ಸ್ಥಳ, ಅಗೋ, ಆ ದೋಣಿಯ ನೆರಳಿನಲ್ಲಿ ಕಾಣುವ ಮರಳ ದಿಬ್ಬೆ—ನಾನೂ, ಮಿತ್ರರೂ, ಲಲಿತಳೂ ಕುಳಿತಿದ್ದ ಆ ಮರೆಯಲಾರದ ಸ್ಥಳ.

ಹೊಟ್ಟೆ ಹಸಿವು ಮರೆತುಹೋಯಿತು. ನನ್ನ ಕಾಲುಗಳಿಗೆ ಹುಚ್ಚು ಹಿಡಿಯಿತು. ನಾನು ನಡೆಯುತ್ತಿರಲಿಲ್ಲ; ಓಡುತ್ತಿದ್ದೆ. ಕಾಲುಗಳು ನೆಲದ ಮೇಲೆ ಬೀಳುತ್ತಿದ್ದುದು ಕಾಣಿಸಲಿಲ್ಲ. ನನ್ನ ಸುಖದ ಬೀಡು, ಆಕಾರವಿಲ್ಲದ ಶೂನ್ಯದಲ್ಲಿ ನಿಂತುಕೊಂಡು ತನ್ನೆರಡು ಕೈಗಳಿಂದಲೂ ನನ್ನನ್ನು ಬಾಚಿ ತಬ್ಬಲು ಆಹ್ವಾನಿಸಿತು. ಆ ಸಮುದ್ರದ ಅಲೆಗಳೂ ಹುಚ್ಚೆದ್ದು ಕುಣಿದು, ನನ್ನನ್ನು ಪ್ರೀತಿಯಿಂದ ಕೂಗಿ ಆಹ್ವಾನಿಸಿತು.

ಓಡಿ ಬಂದ ನಾನು ಕಾಲುಗಳು ಮರಳಿನಲ್ಲಿ ಸಿಕ್ಕಿ ಹೊಸೆದುಕೊಂಡಿದ್ದ ರಿಂದ, ನಾನು ಆ ದೋಣಿಗೆ ಸಮೀಪದಲ್ಲಿ ದೊಪ್ಪೆಂದು ಬಿದ್ದೆ. ಕೈಯಲ್ಲಿ ಭದ್ರವಾಗಿ ಹಿಡಿದಿದ್ದ ಕಾದಂಬರಿ ಜಾರಿ ಸಮುದ್ರದೊಳಕ್ಕೆ ಹೋಗಲು ನೋಡಿತು. ಬೇಗನೆ ಎದ್ದು ಹಾರಿ ಬಿದ್ದು ಅದನ್ನು ಹಿಡಿದುಕೊಂಡೆ. ಬೇಕೆಂದರೆ ಸಮುದ್ರವು ನನ್ನನ್ನು ನುಂಗಲಿ. ಕಾದಂಬರಿಯನ್ನು ನುಂಗಲು ಅದರಿಂದ ಸಾಧ್ಯವಿಲ್ಲ. ಭದ್ರವಾಗಿ ಹಿಡಿದೆತ್ತಿ ಅದನ್ನು ನನ್ನ ಎದೆಯಲ್ಲಿ ಹುದುಗಿ ಸಿಟ್ಟುಕೊಂಡೆ.

ಕಾಲವು ಓಡುತ್ತಿತ್ತು.

—ಕನಸು ಕಂಡೆನೋ, ಕಣ್ಣಿನಿಂದ ನೋಡಿದೆನೋ, ಕಲ್ಪನೆಯ ವೈಪರೀತ್ಯವೋ ನನಗೆ ಈಗ ಒಂದೂ ಸ್ಪಷ್ಟವಾಗಿ ತಿಳಿಯುಲಿಲ್ಲ.

ಸೇತುರಾಮನ ನಾಯಕತ್ವದಲ್ಲಿ ಹತ್ತು ಹದಿನೈದು ಪುಂಡರು ನನ್ನ ಕಡೆಗೆ ಧಾವಿಸಿ ಬಂದರು. ಒಬ್ಬೊಬ್ಬನ ಕೈಯಲ್ಲೂ ನನ್ನ ಬಗ್ಗೆ ದೂಷಿಸಿ ಬರೆದಿದ್ದ 'ಸತ್ಯಸಂಧ' ಪತ್ರಿಕೆ ಇತ್ತು. ಎಲ್ಲರೂ ನನ್ನ ಸುತ್ತಲೂ ಕುಳಿತು ಕೊಂಡು ಬೀಡಿಯನ್ನು ಸೇದಿದರು. ನನ್ನ ಬಗ್ಗೆ ಹೀನವಾಗಿ ಹೇಳಿ ನಗು ತ್ತಿದ್ದರು.

"ಇಲ್ಲಿಗೂ ಅವಳನ್ನು ಹುಡುಕಿ ಬಂದುಬಿಟ್ಟೆಯೇನು ?"

— ಎಂದ ಸೀತುರಾಮು.

"ಇಲ್ಲ ಸಂಪಾದಕರು ಸಮುದ್ರವನ್ನು ಹುಡುಕಿ ಬಂದಿದ್ದಾರೆ!"
—ಎಂದ ಗುಂಪಿನಲ್ಲೊಬ್ಬ.

ಮತ್ತೆ ಎಲ್ಲರೂ ನಕ್ಕರು. ನನ್ನ ಕೈಗಳನ್ನು ಹಿಡಿದು ಎಳೆದುಕೊಂಡು ಹೋಗಿ ಸಮುದ್ರದೊಳಕ್ಕೆ ನೂಕಿದರು. ನಾನು ಅಲೆಗಳ ಮೇಲೆ ತೇಲಾಡಿದೆ; ಸಮುದ್ರದೊಳಕ್ಕೆ ಮುಳುಗಿದೆ. ಬಹಳ ಆಳದಲ್ಲಿ ಹೋಗುತ್ತಿದ್ದೆ. ಮುತ್ತುಹವಳಗಳು ತುಂಬಿದ್ದ ಸಮುದ್ರದ ಅಡಿವಾರಕ್ಕೆ ಬಂದುಬಿಟ್ಟೆ. ಆದರೆ ನನ್ನ ಕೈಯಲ್ಲಿ ಆ ಮುತ್ತುಹವಳಗಳಿಗಿಂತಲೂ ಬೆಲೆ ಬಾಳುವಂಥಾ ನನ್ನ ಕಾದಂಬರಿಯು ಹಾಗೇ ನೀರಿನಲ್ಲಿ ನೆನೆಯದೆ ನನ್ನ ಹೃದಯಕ್ಕಂಟಿಕೊಂಡಿತ್ತು. ಸಮುದ್ರದಾಳದಲ್ಲಿ ನಾನು ಹೋಗುತ್ತಿದ್ದಾಗ, ಸಮುದ್ರದಾಳಕ್ಕೆ ಹೋಗಬಯಸಿದ ಇನ್ನೊಬ್ಬಳ ನೆನಪು ಬಂತು.

'ನೀವು ಒಂದು ಸಲ ನನ್ನನ್ನು ಸಂಧಿಸದಿದ್ದರೆ ಸಮುದ್ರದ ನೀರು ಕೂಡ ನನ್ನನ್ನು ಸಂಧಿಸದಿರುವುದೆ? ಸಮುದ್ರದ ನೀರು ನಿಮಗಿಂತಲೂ ಕರುಣೆಯುಳ್ಳದ್ದು'

—ಎಂದು ಹೇಳಿದ ಲಲಿತ....

ಅವಳು ಬರುವುದರೊಳಗೇ ನಾನು ಅಲ್ಲಿಗೆ ಹೋಗಿಬಿಡುತ್ತೇನೆ. ಅವಳಿಗಾಗಿ ಒಂದೊಂದು ದಿನವೂ, ಒಂದೊಂದು ನಿಮಿಷವೂ, ಒಂದೊಂದು ಕ್ಷಣವೂ ಕಾದಿರುತ್ತೇನೆ. ಪ್ರೇಯುಸಿಗಾಗಿ ಕಾದು ಕುಳಿತಿರುವುದಕ್ಕಿಂತಲೂ ಬೇರೆ ಆನಂದವು ಯಾವ ಲೋಕದಲ್ಲಾದರೂ ಉಂಟೆ! ಅವಳಿಗಾಗಿ ನಾನು ಮುತ್ತು ಸರಗಳನ್ನು ಪೋಣಿಸಿಡುತ್ತೇನೆ; ರತ್ನಹಾರಗಳನ್ನು ಕಟ್ಟಿಡುತ್ತೇನೆ. ಅವಳಿಲ್ಲಿಗೆ ಬಂದ ಬಳಿಕ ಅವಳೂ ನಾನೂ ಮತ್ಸ್ಯರಾಜನ ಬೆನ್ನಿನ ಮೇಲೆ ಕುಳಿತು ಈ ಸಮುದ್ರವೆಲ್ಲವೂ ಸುತ್ತಿ ಬರುತ್ತೇವೆ. ನಮ್ಮನ್ನು ಇಲ್ಲಿ ಯಾರೂ ದೂಷಿಸುವುದಿಲ್ಲ; ಪರಿಹಾಸ್ಯಗೈಯುವುದಿಲ್ಲ; ಅಪವಾದ ಹೊರಿಸುವುದಿಲ್ಲ. ನಾನು ಗಂಡ; ಅವಳು ನನ್ನ ಹೆಂಡತಿ.

ವಿದ್ಯಾರ್ಥಿಯಾಗಿದ್ದಾಗ ನನಗೆ ಜೀವಾತ್ಮದ ಬಗ್ಗೆ ಹೆಚ್ಚು [illegible]ಕ್ಕಾಗಿ ಅರಿತುಕೊಳ್ಳಬೇಕೆಂಬ ಬಯಕೆಯಿತ್ತು. ಸತ್ತು ಹೋದ ವ್ಯಕ್ತಿಗಳ ಆತ್ಮಗಳೊಡನೆ ನನಗೆ ನಿಕಟ ಸಂಪರ್ಕವಿತ್ತು. ಆದ್ದರಿಂದ ಮರಣದ ನಂತರ ಇರುವ ಜೀವನದಲ್ಲಿ ನನಗೆ ವಿಶ್ವಾಸವಿದೆ. ನಾವು ಖಂಡಿತ ಸಮುದ್ರರಾಜನ ಅಖಂಡ ಸಾಮ್ರಾಜ್ಯದಲ್ಲಿ ಸಂಧಿಸುತ್ತೇವೆ. ಇದರಲ್ಲಿ ಸಂಶಯ ಎಡೆಯೇ ಇಲ್ಲ.

ತಟ್ಟನೆ ನನಗೆ ಒಂದು ಆಶೆಯುಂಟಾಯಿತು. ಅವಳು ಇಲ್ಲಿಗೆ ಬರುವುದಕ್ಕೆ ಕೆಲವು ದಿನಗಳಾದರೂ ಆಗಬಹುದು. ಅಷ್ಟರೊಳಗೆ ನನ್ನ ಬಳಿಯಿರುವ ಈ ಕಾದಂಬರಿಗೆ ಒಂದು ಮುಕ್ತಾಯವನ್ನು ಬರೆದು ಹೇಗಾದರೂ ಇದನ್ನು ಅವಳ ಕೈಗೆ ಸಿಗುವ ಹಾಗೆ ಮಾಡಿಬಿಡಬೇಕು. ಅವಳು ಇದನ್ನು ಅತ್ಯುತ್ತಮ ರೀತಿಯಲ್ಲಿ ಪ್ರಕಟಿಸುತ್ತಾಳೆ. ಸಾವಿರಗಟ್ಟಲೆ ಪ್ರತಿಗಳನ್ನು ಪ್ರಕಟಿಸಿ ನಮ್ಮನ್ನು ದೂಷಿಸಿದವರೆಲ್ಲರಿಗೂ ಒಂದೊಂದು ಪ್ರತಿ ಕೊಡುತ್ತಾಳೆ. ಓದಿಬಿಟ್ಟು ಅವರು ನಮಗಾಗಿ ನಿಟ್ಟುಸಿರು ಬಿಡುತ್ತಾರೆ. ನಮ್ಮನ್ನು ದೂಷಿಸಿದ್ದನ್ನು ನೆನೆದು ಪಶ್ಚಾತ್ತಾಪದಿಂದ ಕಣ್ಣೀರಿಡುತ್ತಾರೆ. ಅವರು ನಮ್ಮನ್ನು ಕುರಿತು ನೆನೆಸಿಕೊಳ್ಳುತ್ತಿರುವಾಗ ನಾವು ಅವರ ಮಧ್ಯೆ ಇರುವುದಿಲ್ಲ!

ಸಮುದ್ರದೊಳಗೆ ಹೋಗುತ್ತಿದ್ದ ನನ್ನ ಕಡೆಗೆ ಈಗ ಒಂದು ದೊಡ್ಡ ಮೀನು ಬಾಯಿ ತೆರೆದುಕೊಂಡು ಬಂತು. ಅದು ನನ್ನನ್ನು ಹೊರಲು ಬರಲಿಲ್ಲ; ನುಂಗುವುದಕ್ಕಾಗಿ ಬಂತು. ಸಮುದ್ರಗರ್ಭದೊಳಕ್ಕೆ ಹೋಗುತ್ತಿದ್ದ ನಾನು ಈಗ ಆ ಮೀನಿನ ಹೊಟ್ಟೆಯೊಳಕ್ಕೆ ಹೋಗುತ್ತಿದ್ದೆ.

## [illegible]೭

ಇದು ಕಾದಂಬರಿಯ ಕೊನೆಯ ಅಧ್ಯಾಯ. ಈ ಘಟನೆಯ ಪೂರ್ವಾರ್ಧದಲ್ಲಿ ನಡೆದ ಕೆಲವು ಸಂಭವಗಳ ಸಮಯದಲ್ಲಿ ನಾನು ನನ್ನ ಸ್ವಜ್ಞಾನದಲ್ಲಿರಲಿಲ್ಲ. ಎರಡು ದಿನಗಳು ಕಳೆದ ನಂತರ ಲಲಿತ ನನಗೆ, ನಾನು ನಡೆದುಕೊಂಡ ರೀತಿಯೆಲ್ಲವನ್ನೂ ವಿವರವಾಗಿ ಚಾಚೂ ತಪ್ಪದೆ ಬಣ್ಣಿಸಿ ಹೇಳಿದಳು. ಅವುಗಳನ್ನಿಟ್ಟುಕೊಂಡೇ ನಾನು ಈ ಪುಟಗಳನ್ನು ಬರೆಯುತ್ತಿದ್ದೇನೆ:—

* * *

ಎರಡು ಬಿಸಿನೀರಿನ ಬೊಟ್ಟುಗಳು ನನ್ನ ಹಣೆಯ ಮೇಲೆ ಮೊತ್ತ ಮೊದಲ ಬಾರಿಗೆ ಉದುರಿದವು. ಮತ್ತೆ ಅವು ಅಷ್ಟಕ್ಕೇ ನಿಲ್ಲಲಿಲ್ಲ. ಸತತವಾಗಿ ಎಡೆಬಿಡದೆ ಉದುರುತ್ತಲೇ ಇದ್ದವು. ನನಗೆ ಆ ಬೆಚ್ಚನೆಯ ನೀರ ಬೊಟ್ಟುಗಳು ನೀಡಿದ ಸುಖವು ಬಹಳ ಹಿತವಾಗಿತ್ತು. ಕಣ್ಣುಗಳನ್ನು ತೆಗೆಯಬೇಕೆಂಬ ಯೋಚನೆಯಿಲ್ಲದೆಯೆ ಆ ಸುಖವನ್ನು ಅನುಭವಿಸುತ್ತಿದ್ದೆ.

"ಸೋಮು !....ಸೋಮು !"

ನನ್ನ ಕಿವಿಯ ಬಳಿ ಮೆಲ್ಲಗೆ ಒಂದು ಗಂಟಲಿನ ಧ್ವನಿ ಕೇಳಿಸಿತು.

"ಸೋಮು !....ಸೋಮು !"

ಮತ್ತೆ ಆ ಗಂಟಲಿನ ಧ್ವನಿ ಮೊಳಗಿತು.

ನಾನು ಕಣ್ಣುಗಳನ್ನು ತೆರೆದೆ. ನನ್ನ ಮುಖಕ್ಕೆ ನೇರವಾಗಿ ಮು ವನ್ನಿಟ್ಟುಕೊಂಡು, ನನ್ನ ಕಣ್ಣುಗಳಿಗೆ ನೇರವಾಗಿ ಕಣ್ಣುಗಳನ್ನಿಟ್ಟುಕೊಂಡ ನನ್ನನ್ನು ಕಣ್ಣೀರಿನಿಂದ ತೊಳೆಯುತ್ತಿದ್ದಳು ಲಲಿತ. ಅಹುದು ಲಲಿತಳೇ ನನಗೆ ಸೋಜಿಗವೆನಿಸಿತು. ನನಗಿಂತಲೂ ಮೊದಲೇ ಇಲ್ಲಿಗೆ ಬಂದು ನನಗಾ ಕಾದಿರುವಳಲ್ಲಾ ಎಂದು ಆಶ್ಚರ್ಯಚಕಿತನಾದೆ.

"ನನಗಿಂತಲೂ ಮೊದಲೆ ನೀನು ಸತ್ತು ಹೋದೆಯಾ ಲಲಿತ? ನೀನ ಹೇಗೆ ಇಲ್ಲಿಗೆ ಬಂದೆ?"

—ಎಂದು ಕೇಳಿದೆ.

ಅವಳಿಗಿದು ಅರ್ಥವಾಗಲಿಲ್ಲ. ನನ್ನನ್ನು ವಿಚಿತ್ರವಾಗಿ ದಿಟ್ಟಿಸಿದಳು.

"ನನ್ನನ್ನು ನೀನು ಎಂದು ಕರೆಯುತ್ತಿದ್ದೀರೆ! ಒಂದು ದಿನವಾದರೂ ನೀವು ನನ್ನನ್ನು ಹಾಗೆ ಕರೆದಿದ್ದಿಲ್ಲವಲ್ಲ!"

"ಹೇಳು, ಲಲಿತ! ನೀನು ಯಾವಾಗ ಸತ್ತೆ? ಮೊದಲು ನಿನ್ನ ಕಣ್ಣುಗಳನ್ನು ಒರೆಸಿಕೋ; ಅಥವಾ ನಾನೇ ಒರೆಸಲೇ?"

"ಬೇಡಿ; ನಾನೇ ಒರೆಸಿಕೊಳ್ಳುತ್ತೇನೆ."

ಲಲಿತ ಸ್ವಲ್ಪ ಜರುಗಿ ಕುಳಿತಳು. ಸೀರೆಯ ಸೆರಗಿನಿಂದ ಕಣ್ಣುಗಳನ್ನು ಒರೆಸಿಕೊಂಡಳು.

ನನಗೆ ನಗು ಬಂತು.

"ಇನ್ನು ಆ ಲೋಕದ ಸಂಪ್ರದಾಯಗಳು ನಮಗೆ ಬೇಡ. ನೀನು ಬೇರೆ ನಾನು ಬೇರೆಯಲ್ಲ. ಆ ಲೋಕವು ನಮ್ಮ ಮಟ್ಟಿಗೆ ಸತ್ತು ಮಣ್ಣುಗೂಡಿತು. ನಾವು ನವಯುಗದ ನವ್ಯ ಜೀವಿಗಳು—ಲಲಿತಾ ಏಕೆ ಹಾಗೆ ನೋಡುತ್ತೀಯ?"

"ಅಯ್ಯೋ! ವಿಷಮ ಶೀತಜ್ವರ ಬಂದಹಾಗಿದೆಯಲ್ಲ!"

—ಎಂದು ಚಡಪಡಿಸಿದಳು ಲಲಿತ.

ಬಳಿಕ,

"ಸ್ವಲ್ಪ, ಮಾತನಾಡದಿರಿ. ನಿಮ್ಮನ್ನು ಬೇಡಿಕೊಳ್ಳುತ್ತೇನೆ; ಸ್ವಲ್ಪ ಹೊತ್ತು ಮಾತನಾಡದೆ ಇರಿ"

—ಎಂದಳು.

"ವಿಷಮ ಜ್ವರವೇ! ಸಮುದ್ರದೊಳಗೆ ಬಿದ್ದು ಮೀನಿನ ಹೊಟ್ಟೆಯೊಳಕ್ಕೆ ಹೋದನಂತರವೂ ಅದು ಹೇಗೆ ವಿಷಮಜ್ವರ ಬರುತ್ತದೆ?"

—ಎಂದೆ.

"ಮಾತನಾಡದೆ ಸುಮ್ಮನಿರಿ!"

—ಎಂದು ಮತ್ತೆ ಬೇಡಿಕೊಂಡಳು.

ಅವಳು ಎದ್ದು ಹೋಗಿ ರಕ್ತದ ಹಾಗಿದ್ದ ಕೆಂಬಣ್ಣದ ಪಾನವನ್ನು ಬಟ್ಟಲಿನಲ್ಲಿ ಸುರಿದುಕೊಂಡು ನನ್ನ ತುಟಿಗಳ ಬಳಿಗೆ ತಂದಳು. ನಾನು ಕುಡಿದೆ. ಕರುಳನ್ನು ಹಿಸುಕಿಕೊಂಡು ಬಂತು ಆ ಪಾನೀಯದ ಕಹಿ. ಕಹಿಯಾಗಿದ್ದರೇನು? ಖಾರವಾಗಿದ್ದರೇನು? ಅವಳ ಕೈಯಿಂದ ಈ ರೀತಿ ಕೊಡುವುದೇ ಆದರೆ ಸಾವಿರ ವಿಷದ ಬಟ್ಟಲುಗಳನ್ನು ಬೇಕಾದರೂ ಸಂತೋಷಚಿತ್ತನಾಗಿ ಕುಡಿಯಲು ಸಿದ್ಧನಾಗಿದ್ದೆ.

ಬಟ್ಟಲನ್ನು ಕೆಳಗಿಟ್ಟು, ಬಹಳ ಹೊತ್ತಿನ ತನಕ ಕಣ್ಣು ಮಿಟುಕಿಸದೆ ನನ್ನನ್ನು ದಿಟ್ಟಿಸಿ ನೋಡುತ್ತಿದ್ದಳು. ಆಗತಾನೆ ಹುಟ್ಟಿದ ಮುದ್ದು ಮಗುವನ್ನು ಆಶೆಯಿಂದ ನೋಡುವ ತಾಯಿಯ ಹಾಗೆ ಅವಳು ನನ್ನನ್ನು ನೋಡುತ್ತಿದ್ದಳು. ಅವಳ ತುಟಿಗಳು ಕಂಪಿಸಿದವು. ಹೃದಯ ಹೊಮ್ಮಿ ದುಃಖ ಮರುಕಳಿಸಿತು.

ಅವಳು ಕೊಟ್ಟ ಪಾನವು ನನ್ನೊಳಗೆ ಏನೇನೋ ಬದಲಾವಣೆಗಳನ್ನು ಮಾಡುತ್ತಿತ್ತು. ನನ್ನ ಕಣ್ಣುಗಳು ಚೆನ್ನಾಗಿ ಕಂಡವು. ಮೈಯೆಲ್ಲವೂ ವಿದ್ಯುಚ್ಛಕ್ತಿ ಪಸರಿಸಿದ ಹಾಗಾಯಿತು. ನಾನು ಸುತ್ತುಮುತ್ತಲೂ ಚೆನ್ನಾಗಿ

ಪರಿಕಿಸಿದೆ. ಅದು ಒಂದು ದೊಡ್ಡ ಕೊಠಡಿಯಾಗಿತ್ತು. ವಿದ್ಯುತ್‌ದೀ
ಗಳು ಹಲವು ತೂಗಾಡುತ್ತಿದ್ದವು; ಫ್ಯಾನ್ ಒಂದು ನನ್ನ ತಲೆಗೆ ಸರಿಯಾ
ಸುತ್ತಿತು. ನಾನು ಒಂದು ಮಂಚದ ಮೇಲೆ ಮಲಗಿದ್ದೆ. ನನ್ನನ್ನು ಒಂದ
ಕಂಬಲದ ಹೊದಿಕೆಯು ಮುಚ್ಚಿತ್ತು.

ನನಗೆ ಬೇಗೆಯಾಗಿದ್ದುದರಿಂದ ಆ ಹೊದ್ದಿಕೆಯನ್ನು ತೆಗೆದು ಬಿಸಾಡಿದೆ
ಅದನ್ನು ಕಂಡು ಅವಳ ಮುಖವರಳಿತು.

"ಇನ್ನು ನಿಮಗೆ ಯಾವ ಕಷ್ಟವೂ ಇಲ್ಲ; ವ್ಯೈ ವಾಸಿಯಾಯಿತು
—ಎಂದಳು.

ನನಗೆ ಸ್ವಲ್ಪ ತಿಳಿಯಿತು; ಆದರೆ ಅದರ ಮೇಲೆ ಹೆಚ್ಚಾಗಿ ಏನೂ
ತಿಳಿಯಲಿಲ್ಲ.

"ನೀವು ಸಮುದ್ರ ತೀರದಲ್ಲಿ ಜ್ವರದಿಂದ ಮಲಗಿದ್ದಿರಿ. ನಾನೂ
ಅವರೂ ಒಳ್ಳೆಯ ಸಮಯಕ್ಕೆ ಇವತ್ತು ಆ ಕಡೆ ಬಂದೆವು. ಈಗ ನೀವು
ನಮ್ಮ ಮನೆಯಲ್ಲೇ ಇದ್ದೀರಿ"
—ಎಂದಳು.

ನಾನು ತಳಮಳಿಸಿ ಹೋದೆ. ನಡೆದಿರಬಹುದಾದ್ದೆಲ್ಲಾ ನನ್ನ ಕಣ್ಣ
ಮುಂದೆ ಹಾದುಹೋಯಿತು.

"ಹಾಗಾದರೆ....ಲಲಿತಾ, ನನ್ನನ್ನು ಕ್ಷಮಿಸಿಬಿಡಿ....ನೀನು ಎಂದು
ಕರೆದುಬಿಟ್ಟೆನಲ್ಲ! ಇಲ್ಲ, ಇಲ್ಲ, ನೀವು....ಲಲಿತಾ!"

"ಬೇಡಿ; ನೀನು ಎಂದೇ ಕರೆಯಿರಿ. ಹಾಗೆ ನೀವು ಕೂಗುವಾಗ
ನನಗೆ ಎಷ್ಟು ಆನಂದವಾಗಿರುತ್ತೆ ಬಲ್ಲಿರಾ?"

"ಹಾಗೆ ನಾನು ಕರೆಯಕೂಡದು ಲಲಿತ!"

"ಕೂಡದು!....ಜ್ಞಾನ ತಪ್ಪಿದ್ದಾಗ ನಿಮ್ಮ ಹೃದಯವನ್ನೇ ಮರೆಸಲು
ನಿಮ್ಮಿಂದ ಸಾಧ್ಯವಿಲ್ಲದೆ ಹೋಯಿತು. ಇನ್ನು ಸ್ವಲ್ಪ ಹೊತ್ತು ನೀವು

ಜ್ವರದ ಕಾವಿನಲ್ಲೇ ಮಾತನಾಡಿಕೊಂಡಿರಬಾರದಾಗಿತ್ತೇ ?– ಏನೇನೋ ಹೇಳುತ್ತಿದ್ದಿರಿ ಅಲ್ಲವೆ ?"

—ಎಂದಳು.

ನಾನು ಮೌನವಾಗಿದ್ದೆ; ಅವಳೂ ಮೌನವಾಗಿದ್ದಳು. ಆ ಕೊಠಡಿಯೆಲ್ಲವೂ ಮೌನವಾವರಿಸಿತ್ತು.

ಟೆಲಿಫೋನ್ ಗಂಟೆ ಗಣಗಣವೆಂದು ಬಾರಿಸಿತು. ಲಲಿತಳು ಬಿರಬಿರನೆ ಎದ್ದು ಹೋಗಿ ಅದನ್ನು ಕೈಗೆತ್ತಿಕೊಂಡಳು.

"ಯಾರು ? ಡಾಕ್ಟರೇ ?....ಮೈಗೆ ಪರವಾಯಿಲ್ಲ ಸಾರ್ ! ವಾಸಿಯಾಗಿಬಿಟ್ಟಿತು. ನೀವು ಹೇಳಿದ ರೀತಿಯೇ ಒಂದು ಬಾರಿ ಚೆನ್ನಾಗಿ ಬೆವರಿತು. ಔಷಧ ಕೊಟ್ಟೆ. ಈಗ ಸ್ಪಷ್ಟವಾಗಿ ಮಾತನಾಡುತ್ತಾರೆ.... ಊಟ ಕೊಡಬಹುದೇ....? ಸರಿ; ಬಹಳ ವಂದನೆಗಳು !"

—ಎಂದು ಹೇಳಿ ರಿಸೀವರನ್ನು ಕೆಳಗಿಟ್ಟಳು.

"ಯಾರದು ?"

—ಎಂದು ಕೇಳಿದೆ.

"ಡಾಕ್ಟರ್. ನಿಮ್ಮನ್ನು ಸಮುದ್ರ ತೀರದಿಂದ ತರುತ್ತಿರುವಾಗಲೇ ಅವರನ್ನೂ ಕರೆದುಕೊಂಡು ಬಂದೆವು. ಇಲ್ಲಿಗೆ ಬಂದು ಒಂದು ಗಂಟೆಯ ಕಾಲ ನಿಮ್ಮನ್ನು ಪರೀಕ್ಷಿಸಿ ನೋಡಿದರು. ಹೃದಯಾಘಾತದಿಂದ ಬಂದ ಜ್ವರ ಅಷ್ಟೆ; ಬೇಗನೆ ಗುಣವಾಗುತ್ತದೆಂದು ಹೇಳಿದರು. ಆದರೆ ವಾಸಿಯಾದ ನಂತರವೂ ನೀವು ನೆಮ್ಮದಿಯಾಗಿ ಇಲ್ಲಿ ನಮ್ಮೊಂದಿಗೆ ಕೆಲವು ಕಾಲ ನಿಲ್ಲಬೇಕಂತೆ ! ಇದು ಡಾಕ್ಟರ್ ವಿಧಿಸಿರುವ ಆಜ್ಞೆ"

—ಎಂದಳು.

"ಅದು ಮಾತ್ರ ಸಾಧ್ಯವಿಲ್ಲ; ನಾಳೆಯೇ ನಾನು ಬೊಂಬಾಯಿಗೆ ಹೊರಡಲಿದ್ದೇನೆ"

—ಎಂದೆ.

"ಅದು ಮಾತ್ರ ಸಾಧ್ಯವಿಲ್ಲ! ನಾವಿಬ್ಬರೂ ನಿಮ್ಮನ್ನು ಬಿಡುವುದಿಲ್ಲ"

—ಎಂದಳು ಲಲಿತ.

ಅವರು ಇಬ್ಬರು ಎಂಬುದು ನನಗೆ ಇಷ್ಟು ವೇಳೆ ಕಳೆದ ನಂತರವೇ ಅರಿಯಲು ಸಾಧ್ಯವಾಯಿತು. ಇದುವರೆಗೆ ನನ್ನ ಸ್ಮೃತಿಯನ್ನೆಲ್ಲವೂ ಲಲಿತ ಳೊಬ್ಬಳೇ ತುಂಬಿಕೊಂಡಿದ್ದಳು. ಈಗ ನಾರಾಯಣಸ್ವಾಮಿಯೂ ಜ್ಞಾಪಕಕ್ಕೆ ಬಂದರು.

"ಎಲ್ಲಿ ಅವರು ? ನಾನು ಮರೆತೇ ಹೋದೆ"

—ಎಂದೆ.

"ನೀವು ಕಣ್ಣುಬಿಡುವುದಕ್ಕೆ ಸ್ವಲ್ಪ ಮುಂಚೆ ತಾನೇ ಅವರು ಮಹ ಡಿಗೆ ಹೋದರು. ಅದುವರೆಗೂ ನಿಮ್ಮ ಬಳಿಯೇ ಕುಳಿತಿದ್ದರು. ನನ್ನನ್ನು ಗಮನಿಸಿಕೊಳ್ಳುವಂತೆ ಹೇಳಿ ಹೋಗಿದ್ದಾರೆ. ಕರೆದುಕೊಂಡು ಬರಲೇ ?"

—ಎಂದಳು.

"ಬೇಡಿ, ಅವರು ನಿದ್ದೆ ಮಾಡಲಿ. ಬೆಳಗ್ಗೆ ನೋಡುತ್ತೇನೆ"

—ಎಂದು ಅವಳನ್ನು ತಡೆದೆ.

ಲಲಿತ ಎದ್ದು ಹೋಗಿ ರೊಟ್ಟಿಯೂ, ಬಿಸಿಬಿಸಿ ಹಾಲನ್ನೂ ತಂದಳು. ಕಿತ್ತಳೆಹಣ್ಣು ಸುಲಿದು ಕೊಟ್ಟಳು. ತಿರುಚಿಯಿಂದ ಹೊರಟ ಮೊದಲ ದಿನದ ರಾತ್ರಿಯ ನಂತರ ಊಟವನ್ನೇ ಕಾಣದ ನಾನು ಅವುಗಳನ್ನು ಸವಿದು ತಿಂದೆ. ಮಧ್ಯಾಹ್ನ ತೆಂಗಿನ ಮರದ ನೆರಳಿನಲ್ಲಿ ಬಾಡಿ ಬಿದ್ದಿದ್ದ ನನ್ನ ಆ ದೃಶ್ಯವು ಈಗ ನನ್ನ ಮನೋವೇದಿಕೆಯ ಮುಂದೆ ಹಾದುಹೋಯಿತು.

ನಾನು ತಿನ್ನುವುದನ್ನು ನೋಡಿ ಅವಳು ಮುಗುಳ್ನಕ್ಕಳು. ತಿಂದು ಮುಗಿಸಿದ ನಂತರ,

"ನಿದ್ದೆ ಬರುತ್ತಿದೆಯೆ ?

—ಎಂದು ಕೇಳಿದಳು.

"ಬರೋದಿಲ್ಲ!"

"ಏಕೆ ಬರೋಲ್ಲ?"

"ನೀವು ಇಲ್ಲಿದ್ದೀರಲ್ಲಾ? – ಕಣ್ಣುಮುಚ್ಚಿ ನಿದ್ದೆ ಹೋದರೆ ನಿಮ್ಮನ್ನು ಹೇಗೆ ನೋಡಿಕೊಂಡಿರಲು ಸಾಧ್ಯ?"

"ನಾನು ನಿಮ್ಮ ಹಾಗಲ್ಲ. ನಿದ್ದೆ ಹೋದ ನಂತರವೂ ನನಗೆ ಬೇಕಾದವರನ್ನು ಕನಸಿನಲ್ಲಿ ನೋಡುತ್ತಿರುತ್ತೇನೆ"

—ಎಂದಳು.

ಅವಳು ಹೀಗೆ ಹೇಳಿದಾಗ ನನಗೆ ಸಂಕಟವಾಯಿತು. ಜೀವನವೇ ಅವಳಿಗೆ ಒಂದು ದೀರ್ಘ ಕನಸು. ಅವಳು ಬಯಸುವ ಸುಖವೆಲ್ಲವನ್ನೂ ಅವಳು ಕನಸಿನಲ್ಲಲ್ಲದೇ ಬೇರೆಲ್ಲೂ ಪಡೆಯಲು ಸಾಧ್ಯವಿಲ್ಲ. ಆ ನನ್ನ ಕನಸಿನ ಹೆಣ್ಣಿನ ಬಗ್ಗೆ ಮರುಕವುಂಟಾಯಿತು.

"ನಿಮ್ಮ ಅಪ್ಪಣೆಯ ಪ್ರಕಾರ ನೀವು ಬರ್ಮಾಗೆ ಹೊರಡುವ ಮುನ್ನವೇ ನಿಮ್ಮನ್ನು ಸಂಧಿಸಿಬಿಟ್ಟೆ. ಇನ್ನು ಸಮುದ್ರದ ನೀರಿಗೆ ಅಪಾಯವಿಲ್ಲ ತಾನೇ!"

—ಎಂದೆ.

"ನೀವಾಗಿ ಸಂಧಿಸಲಿಲ್ಲ; ನಾನು ನಿಮ್ಮನ್ನು ಪತ್ತೆ ಹಚ್ಚಿದ್ದೇನೆ."

"ಹೇಗಾದರೂ ನಾವು ಸಂಧಿಸಿದ್ದೇವೆ. ದೇವರು ಕರುಣೆಯುಳ್ಳವನು."

"ಒಂದು ವಾರವಾದರೂ ನೀವು ಇಲ್ಲಿ ನಿಲ್ಲಬೇಕು. ಡಾಕ್ಟರ್ ಹೇಳಿದ್ದಾರೆ."

"ದಯವಿಟ್ಟು ಕ್ಷಮಿಸಿರಿ. ಬೆಳಗ್ಗೆ ಆರು ಗಂಟೆಗೆಲ್ಲಾ ನಾನು ಇಲ್ಲಿಂದ ಹೊರಡಬೇಕು. ಅದಕ್ಕೆ ಮೇಲೆ ಒಂದು ನಿಮಿಷವೂ ವಿಳಂಬ ಮಾಡುವುದಿಲ್ಲ"

—ಎಂದೆ ನಿರ್ಧಾರದ ಧ್ವನಿಯಲ್ಲಿ.

ಆದರೆ ಅವಳು ಅದಕ್ಕೆ ಸಮ್ಮತಿಸಲೇ ಇಲ್ಲ. ಅಲ್ಲಿ ನಿಲ್ಲಬೇಕೆಂದು ಅವಳು ಬಹಳವಾಗಿ ಹಟ ಹಿಡಿದಳು. ನನ್ನ ಪ್ರಕೃತಿ ಕೆಟ್ಟುಹೋಗುವು

ದೆಂಬ ಕಾರಣವನ್ನು ಮುಂದೆ ಮಾಡಿ ಬಹಳ ಬೇಡಿಕೊಂಡಳು. ಅವಳ ಹಟವು ಅರ್ಥಶೂನ್ಯವಾದುದ್ದೆಂದು ನನಗನ್ನಿಸಿತು.

ನಾನು ಹೇಳಿದ್ದೆ

"ಲಲಿತಾ! ಇನ್ನು ಒಂದು ವಾರವಲ್ಲ, ಒಂದು ವರ್ಷ ನಿ... ಕೂಡ ನಾವು ಅಗಲಿ ಹೋಗಬೇಕಾದವರು ತಾನೇ? ಪರಿಸ್ಥಿತಿ ಈ... ವಾರದ ನಂತರ ಇನ್ನೂ ಹದಗೆಟ್ಟಿರುತ್ತದೆ. ಆದ್ದರಿಂದ ನನ್ನ ಈ ಸಿಣ... ಅಡ್ಡಿ ಬರಬೇಡಿ. ಈಗ ಸಿಕ್ಕಿರುವ ಸದವಕಾಶದ ವೇಳೆಯನ್ನು ಸಂ... ದಿಂದ ಮಾತನಾಡುತ್ತಾ ಕಳೆಯೋಣ. ಅಗಲುವಿಕೆಯ ದುಃಖದ ಮಾತು ಈಗೇಕೆ?"

"ಸರಿ; ನಿಮ್ಮಿಷ್ಟ. ನೀವು ಮಾತನಾಡುತ್ತಲೇ ಇರಿ ನಾನು ಕೇಳು... ತ್ತಲೇ ಇರುತ್ತೇನೆ!"

—ಎಂದಳು.

ತಟ್ಟೆಂದು ಹಾಸಿಗೆಯಿಂದೆದ್ದೆ. ಹಾಸಿಗೆಯ ನಾಲ್ಕು ಕಡೆಯೂ ಸುತ್ತಿ ನೋಡಿದೆ. ನನ್ನ ಕಾದಂಬರಿಯನ್ನು ಕಾಣಲಿಲ್ಲ.

"ನನ್ನ ಕಾದಂಬರಿಯೆಲ್ಲಿ? ಸಮುದ್ರ ತೀರದಲ್ಲೇ ಹಾಕಿಬಿಟ್ಟನೇ?"

—ಎಂದೆ, ದಿಗಿಲುಗೊಂಡು.

"ಕಾದಂಬರಿ ಸುರಕ್ಷಿತವಾಗಿದೆ. ಅದನ್ನು ಅವರು ತಮ್ಮೊಂದಿಗೆ ಮುಪಡಿಗೆ ತೆಗೆದುಕೊಂಡು ಹೋಗಿದ್ದಾರೆ"

—ಎಂದಳು ಲಲಿತ.

ನನಗೆ ಆಗ ಶಾಂತಿಯೆನಿಸಿತು.

ಆ ರಾತ್ರಿಯಲ್ಲಿ ನಾವು ಗಂಟೆಗಟ್ಟಲೆ, ಒಬ್ಬರೊಂದಿಗೊಬ್ಬರು ಮಾತನಾಡಿಕೊಂಡೂ, ಮಾತನಾಡದೆಯೂ ನೋಡಿಕೊಳ್ಳುತ್ತಲೂ, ನೋಡದ ಹಾಗೆ ಇದ್ದುಕೊಂಡೂ, ನಗುತ್ತಲೂ, ಅಳುತ್ತಲೂ ಕಾಲ ಕಳೆದೆವು. ರಾತ್ರಿ ವೇಳೆಯು ಯೌವನದಲ್ಲಿರುವವರನ್ನು ಹುಚ್ಚರನ್ನಾಗಿ ಮಾರ್ಪಡಿಸುತ್ತದೆ.

ನಾವು ಉಚ್ಚರಾಗಿ ಮಾರ್ಪಟ್ಟೆವು. ಆದರೆ ಉನ್ಮತ್ತರಾಗಲಿಲ್ಲ. ನಮ್ಮನ್ನು ನುಸುಳಿಸಿದ ಆ ರಾತ್ರಿಯ ಏಕಾಂತತೆಗೆ ನಮ್ಮನ್ನು ಕೆಡಿಸುವಷ್ಟು ಶಕ್ತಿ ಇರಲಿಲ್ಲ.

ಕಣ್ಣುಗಳು ನಿದ್ದೆಗಾಗಿ ಕಾತರಿಸಿದವು. ದೇಹಸ್ಥಿತಿಯೂ ನಿದ್ದೆಗಾಗಿ ಹಂಬಲಿಸಿತು. ಆದ್ದರಿಂದ ನನ್ನರಿಯದೇ ನಿದ್ದೆಯ ವಶವಾಗಿ, ನಾನು ಗಾಢನಿದ್ರೆಯನ್ನು ಅಪ್ಪಿದೆ.

ಗಂಟೆ ಐದು ಹೊಡೆಯಿತು. ಕಿಟಕಿಯ ಮೂಲಕ ಅರುಣೋದಯವಾಗುತ್ತಿರುವುದನ್ನು ಕಂಡೆ. ಲಲಿತಳು ಆರಾಮಕುರ್ಚಿಯಲ್ಲಿ ಕುಳಿತಿದ್ದ ಹಾಗೇ ನಿದ್ದೆ ಹೋಗುತ್ತಿದ್ದಳು. ಅವಳು ಕಣ್ಣು ಬಿಡುವ ಮೊದಲು ಅವಳಿಗರಿಯದೆ ಅವಳ ಮುಖದ ಸೊಗಸಿನ ಸವಿಯನ್ನು ಎಷ್ಟು ಹೆಚ್ಚಾಗಿ ಹೀರಬಹುದೋ ಅಷ್ಟೂ ಹೀರ ಬಯಸಿದೆ. ವ್ಯರ್ಥವಾಗಿ ಕಣ್ಣು ಮಿಟುಕಿಸಿ, ಆ ಮಿಟುಕಿಸುವ ಕ್ಷಣಾರ್ಧ ಸಮಯದಲ್ಲಿ ಸಿಗುವ ಸುಂದರ ನೋಟವನ್ನೂ ನಾನು ಕಳೆದುಕೊಳ್ಳಲಿಲ್ಲ.

ಅವಳು ಕಣ್ಣು ಬಿಟ್ಟಳು. ತೆರೆದ ಕಣ್ಣುಗಳು ನನ್ನನ್ನು ನೋಡಿ ನಕ್ಕವು. ಅರೆರೆ! ಅವಳು ಇನ್ನೂ ಸ್ವಲ್ಪ ಹೊತ್ತು ಮಲಗಿರಬಾರದೇ? ನಾನು ನೋಡುತ್ತಿದ್ದುದನ್ನು ಕೆಡಿಸಿಬಿಟ್ಟಳೇ! ಇನ್ನು ಮುಂದೆ ಯಾವ ಜನ್ಮದಲ್ಲಿ ನಾನು ಅವಳನ್ನು ಹೀಗೆ ನೋಡುತ್ತೇನೆ?

"ಮುಂಜೆಯೇ ಎದ್ದಿರೇನು?"

"ಇಲ್ಲ; ಐದು ನಿಮಿಷಗಳೂ ಆಗಲಿಲ್ಲ."

"ಇಗೋ, ಐದು ನಿಮಿಷಗಳಲ್ಲಿ ಬಂದು ಬಿಡುತ್ತೇನೆ"

—ಎಂದು ನೆಗೆದುಕೋಂಡು ಎದ್ದವಳೇ ಕೊಠಡಿಯ ಹೊರಗೆ ಹೋದಳು. ಕಾಲು ಗಂಟೆಯಾಯಿತು. ಕೈಯಲ್ಲಿ ಹಲ್ಲುಪುಡಿಯನ್ನು ತೆಗೆದುಕೊಂಡು ಬಂದು,

"ಬಿಸಿ ನೀರು ಸಿದ್ಧವಾಗಿದೆ. ಸ್ನಾನ ಮಾಡುತ್ತೀರಾ?"
—ಎಂದು ಕೇಳಿದಳು.

ಮೈನೋವೆಲ್ಲವೂ ಹೋಗುವಂತೆ ಬಿಸಿನೀರಿನಲ್ಲಿ ಸ್ನಾನಮಾಡಿ ಗೆಳೆಯರು ನಾರಾಯಣಸ್ವಾಮಿಯವರ ಉಡುಪುಗಳು ನನಗಾಗಿ ತೆಗೆದಿ ಡ್ಡವು. ಧರಿಸಿಕೊಂಡೆ. ಕಾಫಿಯು ಮೇಜಿಗೆ ಬಂತು. ಕುಡಿದು ಬಿ ಕನ್ನಡಿಗೆದುರಾಗಿ ನಿಂತು ತಲೆ ಬಾಚಿಕೊಂಡೆ.

ಕನ್ನಡಿಯಲ್ಲಿ ಕಂಡ ನನ್ನ ರೂಪವು ಏಕೋ ಮುಸಕಾಗಿ ಮಾರ್ಪಟ್ಟಿ ಬಾಚಣಿಗೆಯನ್ನು ಹಿಡಿದಿದ್ದ ನನ್ನ ಬಲಗೈ ನಡುಗುತ್ತಿರುವುದನ್ನು ಕಂ ಕನ್ನಡಿಯಲ್ಲಿ ನನ್ನ ರೂಪವು ಮುಸಕಾದುದಕ್ಕೆ ಕಾರಣ ಕನ್ನಡಿಯ ನನ್ನ ಕಣ್ಣುಗಳಲ್ಲಿ ತುಂಬಿ ಹರಿದ ಕಣ್ಣೀರು. ಅಂಗವಸ್ತ್ರದಿಂದ ಕಣ್ಣುಗಳ ಒರೆಸಿಕೊಂಡೆ. ನಾನಿಷ್ಟು ಹೇಡಿಯಾಗುತ್ತೇನೆಂದು ಒಂದು ದಿನವಾದರ ಭಾವಿಸಿರಲಿಲ್ಲ. ನನ್ನ ಕಣ್ಣುಗಳಲ್ಲೇ ಈ ಕಣ್ಣೀರು?

ಕನ್ನಡಿಯಲ್ಲಿ ಈಗ ಮತ್ತೊಂದು ರೂಪವು ಕಾಣಿಸಿತು. ಲಲಿತ ನನ್ನ ಪಕ್ಕದಲ್ಲಿ ನಿಂತಿದ್ದಳು. ನನ್ನ ಕಣ್ಣೀರನ್ನು ಕಂಡ ಅವಳು ಸ ಮಗುವಿನ ಹಾಗೆ ಬಿಕ್ಕಿ ಬಿಕ್ಕಿ ಅತ್ತಳು. ಕಣ್ಣೀರಿನ ಕಟ್ಟೆ ಒಡೆಯಿತು.

ನಾನು ತಲೆ ಬಾಚಿಕೊಂಡು ಹಿಂದಕ್ಕೆ ತಿರುಗಿದೆ. ನನಗೆ ದಾ ಬಿಡಲು ಬಯಸದವಳ ಹಾಗೆ ಅವಳು ಅಡ್ಡನಿಂತಳು. ಅವಳ ತುಟಿಗಳ ತವಕಿಸಿದವು.

"ನೀವು ಹೋಗಲೇ ಬೇಕೆ?"

"ಬೇರೆ ದಾರಿ?"

"ಇಲ್ಲ; ನೀವು ಇಲ್ಲೇ ಇರಿ."

ಇನ್ನು ಒಂದು ಕ್ಷಣ ಆ ಸ್ಥಳದಲ್ಲಿ ಅವಳ ಮುಂದೆ ನಿಂತರೆ, ನಾನ

ನನ್ನ ಸಂಯಮವೆಲ್ಲವನ್ನೂ ಕಳೆದುಕೊಂಡು ಬಿಡುವ ಹಾಗಿತ್ತು. ತಲೆಯನ್ನು ತಗ್ಗಿಸಿಬಿಟ್ಟೆ; ಸ್ವಲ್ಪ ಸರಿದು ನಿಂತೆ.

"ನಾನು ಹೋಗಬೇಕು ಲಲಿತ! ಹೋಗುವ ಮೊದಲು ಅವರನ್ನು ಕಂಡು ಮಾತನಾಡಬೇಕು. ಅವರು ಈಗ ಎದ್ದಿರಬಹುದೇ?"

"ಏಳುವ ವೇಳೆಯಾಯಿತು; ಅಗೋ ಆ ಕೋಣೆಯಲ್ಲಿದ್ದಾರೆ"

—ಎಂದು ಮಹಡಿಯ ಕಡೆ ಕೈ ತೋರಿಸಿದಳು.

ನಾನು ಮಹಡಿಯ ಮೆಟ್ಟಲು ಹತ್ತಿದೆ. ಅವಳೂ ನನ್ನನ್ನು ಹಿಂಬಾಲಿಸಿದಳು. ಕೋಣೆಯ ಬಾಗಿಲು ಸುಮ್ಮನೆ ಮುಚ್ಚಿತ್ತು. ಕೋಣೆಯಲ್ಲಿ ಅವರು ಕಾಣಿಸಲಿಲ್ಲ. ಹಾಸಿಗೆ ಸುತ್ತಲ್ಪಟ್ಟಿತ್ತು. ಅಲ್ಲಿದ್ದ ಕುರ್ಚಿಯಲ್ಲಿ ಕುಳಿತೆ. ಲಲಿತ ಕೆಳಗೆ ಹೋಗಿ ಅವರನ್ನು ಹುಡುಕಿ ಬಂದಳು. ಅವಳ ಮುಖದಲ್ಲಿ ದಿಗಿಲು ಮೂಡಿತ್ತು. ತವಕಗೊಂಡು ಕೋಣೆಯಲ್ಲಿ ಅಲ್ಲಿ ಇಲ್ಲಿ ಹುಡುಕಿದಳು.

"ಎಲ್ಲೂ ಅವರು ಕಾಣಿಸಲಿಲ್ಲವಲ್ಲ!"

—ಎಂದಳು.

ನನಗೇನೂ ತಿಳಿಯಲಿಲ್ಲ. ಎದ್ದು ಹೋಗಿ ಅವರ ಮೇಜವನ್ನು ನೋಡಿದೆ. ಅಲ್ಲಿ ನನ್ನ ಕಾದಂಬರಿಯಿತ್ತು. ಅದನ್ನು ಕೈಗೆ ತೆಗೆದುಕೊಂಡಾಗ ಅದರೊಳಗಿನಿಂದ ಒಂದು ಕವರು ಬಿತ್ತು. ಅದರ ವಿಳಾಸವನ್ನು ನೋಡಿದೆ.

'ಸೋಮು—ಲಲಿತ, ಇಬ್ಬರಿಗೂ'

—ಎಂದು ಬರೆದಿತ್ತು.

ಇಷ್ಟರಲ್ಲಿ ಲಲಿತಳೂ ನನ್ನ ಪಕ್ಕದಲ್ಲಿ ಓಡಿ ಬಂದು ನಿಂತಳು. ಅವಳ ಕಣ್ಣುಗಳಲ್ಲಿ ನೀರು ತುಂಬಿತು.

'ಮುದ್ದು ಮಕ್ಕಳಿರಾ!'

—ಎಂದು ಕಾಗದವು ಮೊದಲು ಮಾಡಿತ್ತು. ಕಾಗದವು ಸ್ವ
ದೊಡ್ಡದಾಗಿ ಬರೆದಿದ್ದರಿಂದ ತಕ್ಷಣ ಕೊನೆಯ ಸಾಲುಗಳನ್ನು ಓದಿದೆ.

"ಆದ್ದರಿಂದ ಇಂದಿನ ವಿಮಾನದಲ್ಲಿ ಬರ್ಮಾಗೆ ಹೋಗುತ್ತೇನೆ. ಮೊದಲೇ ರಹದಾರಿಯನ್ನು ಪಡೆದು ಕೊಂಡಿದ್ದೇನೆ. ದಯವಿಟ್ಟು ನನ್ನನ್ನು ಹುಡುಕುವ ಪ್ರಯತ್ನದಲ್ಲಿ ವ್ಯರ್ಥವಾಗಿ ಅಲೆಯಬೇಡಿ. ನನ್ನ ಪ್ರೀತಿಗೆ ನೀವು ಒಳಗಾಗಬೇಕು. ಮತ್ತೆ ನಿಮ್ಮನ್ನು ಕೇಳಿಕೊಳ್ಳುತ್ತೇನೆ. ನೀವು ಒಂದಾಗಿ ಬಾಳಿರಿ. ನಿಮಗೆ ನನ್ನ ಹೃದಯಪೂರ್ವಕ ಶುಭಾಶಯಗಳು.

**ನಾರಾಯಣಸ್ವಾಮಿ."**

"ಪೂರ್ತಿ ಓದಿ ಅದನ್ನು"

—ಎಂದು ಲಲಿತ ಕಾತರಿಸಿದಳು.

"ಓದುವುದಕ್ಕೆ ಈಗ ಸಮಯವಿಲ್ಲ ಲಲಿತ. ತಕ್ಷಣ ಹೊರ
ವಿಮಾನ ನಿಲ್ದಾಣಕ್ಕೆ ಹೋದರೆ ಅವರನ್ನು ಹೇಗಾದರೂ ಕರೆದುಕೊಂ
ಬರಬಹುದು"

—ಎಂದೆ.

ಕಾರು ತೆಗೆದುಕೊಂಡು ಇಬ್ಬರೂ ಹೊರಟೆವು. ಆ ಕಾಗದವು ನನ
ಜೇಬಿನಲ್ಲಿತ್ತು. ಹಿಂದಿನ ಸೀಟಿನಲ್ಲಿದ್ದ ಲಲಿತ ಅಸ್ತವ್ಯಸ್ತವಾಗಿ ಬಿ
ಕೊಂಡಿದ್ದಳು. ಕಾರು ಐವತ್ತು ಮೈಲಿ ವೇಗದಲ್ಲಿ ಹಾರುತ್ತಿತ್ತು.

ವಿಮಾನವು ಹೊರಡುವುದಕ್ಕೆ ಐದು ನಿಮಿಷಗಳಿತ್ತು. ನಿಲ್ದಾ
ದೊಳಕ್ಕೆ ಕಾರು ನುಗ್ಗುವುದನ್ನು ನಾರಾಯಣಸ್ವಾಮಿ ಮೊದಲೇ ನೋ
ಬಿಟ್ಟರು. ಬಹಳ ವೇಗವಾಗಿ ಅವರು ನಮ್ಮ ಕಾರಿನ ಕಡೆಗೆ ಧಾವಿಸಿ ಬಂದರು
ಕಾರನ್ನು ನಿಲ್ಲಿಸಿದೆ. ಬಾಗಿಲನ್ನು ತೆರೆದುಕೊಂಡು ಲಲಿತ ಓಡಿಹೋಗಿ ಅವ

ಕಾಲುಗಳಲ್ಲಿ ಬಿದ್ದು, ಹಿಡಿದುಕೊಂಡಳು. ಕಾಲುಗಳನ್ನು ಅವಳು ಬಿಡಲಿಲ್ಲ. ನೆಲದ ಮೇಲಿಂದ ಏಳಲೂ ಇಲ್ಲ.

ನಾನು ಮೆಲ್ಲಗಿಳಿದು ಅವರ ಮುಂದೆ ಹೋಗಿ ನಿಂತೆ.

ನಾರಾಯಣಸ್ವಾಮಿ ಶ್ರಮಪಟ್ಟು ಅವಳನ್ನು ನೆಲದಿಂದ ಹಿಡಿದೆತ್ತಿದರು. ಅವಳನ್ನು ಅಪ್ಪಿಕೊಂಡ ಹಾಗೇ ಕಾರಿನ ಬಳಿ ಕರೆದು ತಂದರು. ಲಲಿತಳ ಬಿಕ್ಕೂ ಅಳುವೂ ಹೆಚ್ಚಾಯಿತು.

"ನನ್ನನ್ನು ಕ್ಷಮಿಸಿ; ನಾನು ಮಾಡಿದ್ದೆಲ್ಲವೂ ತಪ್ಪು. ಎಲ್ಲವನ್ನೂ ಮರೆತುಬಿಡಿ. ಮನೆಗೆ ಬನ್ನಿ"

—ಎಂದಳು.

ನಾರಾಯಣಸ್ವಾಮಿ ನನ್ನನ್ನು ನೋಡಿದರು. ನನಗೆ ಅವರನ್ನು ತಿರುಗಿ ನೋಡುವ ಧೈರ್ಯವಿರಲಿಲ್ಲ.

"ನಿಮ್ಮ ಶಾಂತ ಜೀವನದಲ್ಲಿ ನಾನು ಅಡ್ಡಿ ಬಂದುಬಿಟ್ಟೆ. ಇನ್ನು ಎಂದೆಂದಿಗೂ ಇಂಥಾ ತಪ್ಪನ್ನು ಮಾಡುವುದಿಲ್ಲ. ದಯವಿಟ್ಟು ತಿರುಗಿ ಬನ್ನಿ"

—ಎಂದೆ.

ನಾರಾಯಣಸ್ವಾಮಿ ನನ್ನನ್ನು ನೋಡಿ ಮುಗುಳ್ನಕ್ಕರು. ಲಲಿತಳ ಕಡೆ ತಿರುಗಿ,

"ಮೊದಲು ನೀನು ಅಳುವುದನ್ನು ನಿಲ್ಲಿಸಬೇಕು"

—ಎಂದರು.

ಅವಳು ಕಣ್ಣುಗಳನ್ನು ಒರೆಸಿಕೊಂಡಳು.

"ನಿಮ್ಮಿಬ್ಬರಿಗೂ ಇದನ್ನು ಹೇಳುತ್ತಿದ್ದೇನೆ:—ಮೊದಲಿಗೆ ನಿಮ್ಮಲ್ಲಿ ಯಾರೂ ತಪ್ಪು ಮಾಡಲಿಲ್ಲ ಎಂಬುದನ್ನು ನೀವು ಅರಿಯಬೇಕು. ಈ ಅರಿವು ಬಂದರೇನೆ ನಿಮ್ಮನ್ನು ನನ್ನಿಂದ ಅರ್ಥಮಾಡಿಕೊಳ್ಳಲು ಸಾಧ್ಯ. ಮಾಡದ ತಪ್ಪಿಗೆ ಕ್ಷಮಾಪಣೆಯೇಕೆ? ಕಣ್ಣೀರೇಕೆ?"

—ಎಂದರು.

"ಹೇಗಿದ್ದರೂ ಸರಿ; ನೀವು ಈಗ ಮನೆಗೆ ಬರಬೇಕು"

—ಎಂದಳು ಲಲಿತ.

"ನನ್ನ ಕಾಗದವನ್ನು ನೀವು ಪೂರ್ತಿ ಓದಿದಿರೇ? ಆ ಕಾಗದ ಈ[illegible] ಎಲ್ಲಿದೆ?"

—ಎಂದು ಕೇಳಿದರು.

ನಾನು ಕಾಗದವನ್ನು ತೆಗೆದುಕೊಟ್ಟೆ.

"ಕಾಗದವನ್ನೇನೂ ನಾನು ಓದಲಿಲ್ಲ. ಅದನ್ನು ಓದುವುದೂ ಬೇಡ. ನನಗೆ ಬೇಕಾದ್ದು ನೀವು; ನಿಮ್ಮ ಕಾಗದವಲ್ಲ"

—ಎಂದಳು ಲಲಿತ.

"ನನಗಾಗಿ ಈ ಕಾಗದವನ್ನು ನೀವು ಈಗ ಓದಬೇಕು. ಇದರಲ್ಲಿ ಬರೆದಿರುವುದು ನನ್ನ ಕೊನೆಯ ತೀರ್ಮಾನ. ಇದನ್ನು ನಾನು ಬದಲಾಯಿಸುವುದಿಲ್ಲ. ಏಕೆ ಗೊತ್ತೆ? ನಾನು ಮಾಡುವ ಉತ್ತಮ ಕಾರ್ಯವೆಂದು ಇದನ್ನು ಭಾವಿಸುತ್ತೇನೆ."

ಲಲಿತ ಆ ಕಾಗದವನ್ನು ಓದಿದಳು. ಮತ್ತೆ ನಾನೂ ಓದಿದೆ.

"ಸೋಮೂ! ಲಲಿತ ನಿಮಗೆಂದೇ ಹುಟ್ಟಿದವಳು. ಇದನ್ನು ನಾನು ಬಹಳ ದಿನಗಳ ಹಿಂದೆಯೇ ತಿಳಿದುಕೊಂಡೆ. ಆದ್ದರಿಂದಲೇ ನಿಮ್ಮ ಹೃದಯಗಳಲ್ಲಿ ಪ್ರೀತಿ ಬೆಳೆಯಲು ನಾನು ದಾರಿ ಮಾಡಿಕೊಟ್ಟೆ."

"ಈ ರೀತಿಯೆಲ್ಲಾ ನೀವು ಯಾವ ತೀರ್ಮಾನವೂ ಮಾಡಬೇಡಿ. ಅವರನ್ನು ಇನ್ನು ಮೇಲೆ ನನ್ನ ಅಣ್ಣನೆಂದು ಭಾವಿಸಿಕೊಳ್ಳುತ್ತೇನೆ"

—ಎಂದಳು ಲಲಿತ.

"ಮನಸ್ಸಿನ ಭಾವನೆಗಳನ್ನು ಇಷ್ಟ ಬಂದ ಹಾಗೆ ಬದಲಾಯಿಸಿಕೊಳ್ಳಲು ಸಾಧ್ಯವಿಲ್ಲ ಲಲಿತ. ಅದು ಈಗ ಅವಶ್ಯವೂ ಅಲ್ಲ. ಅವರು

ನಿನಗೆ ಅಣ್ಣನಾಗಿರುವುದಕ್ಕಿಂತಲೂ, ನಾನು ನಿನಗೆ ತಂದೆಯಾಗಿಯೂ, ಅವರು ಪತಿಯಾಗಿಯೂ ಇರುವುದನ್ನೇ ಬಯಸುತ್ತೇನೆ. ನನ್ನ ಬಹಳ ದಿನಗಳ ಆಶೆಯಿದು. ಇದನ್ನು ನನಗಾಗಿ ನಿರಾಕರಿಸಬೇಡ!"

ಇಷ್ಟರೊಳಗೆ ವಿಮಾನವು ಹೊರಡುವುದಕ್ಕೆ ಹೊತ್ತಾಯಿತೆಂದು ಅವರನ್ನು ಕರೆದುಕೊಂಡು ಹೋಗಲು ಹೆಣ್ಣಾಳು ಬಂದಳು. ನಾರಾಯಣ ಸ್ವಾಮಿ ಕಾರಿನಿಂದ ಇಳಿದರು. ನಾವೂ ಇಳಿದೆವು. ಎಲ್ಲರೂ ವಿಮಾನದ ಬಳಿಗೆ ಹೋದೆವು.

"ದಯವಿಟ್ಟು ನಗುನಗುತ್ತಾ ನನ್ನನ್ನು ನೀವು ಕಳುಹಿಸಿಕೊಡಬೇಕು"

—ಎಂದು ಕೇಳಿಕೊಂಡರು.

ವಿಶಾಲ ಮನೋಭಾವವನ್ನುಳ್ಳ ಒಂದು ಉತ್ತಮರನ್ನು ಹೊತ್ತು ಕೊಂಡು ವಿಮಾನವು ಆಕಾಶಕ್ಕೆ ಹಾರಿತು. ನಾವು ಆಕಾಶವನ್ನು ಕಣ್ಣು ಬಿಟ್ಟು ನೋಡುತ್ತ ನಿಂತೆವು. ವಿಮಾನವು ಚಿಕ್ಕ ಹದ್ದಿನ ಹಾಗೆ ತೋರಿತು; ನಂತರ ಒಂದು ಹುಳುವಿನಾಕಾರ ತಾಳಿತು. ಅದೂ ಹೋಗಿ ಕಣ್ಣಿಗೆ ಕಾಣಿಸದ ಹಾಗಾಗುವವರೆಗೂ ನೋಡುತ್ತ ನಿಂತೆವು. ಕೈಯಲ್ಲಿ ಅವರು ಬರೆದಿದ್ದ ಕಾಗದವಿತ್ತು.

"ಮುದ್ದು ಮಕ್ಕಳಿರಾ!

ನೀವು ಇಬ್ಬರೂ ನನ್ನ ಎರಡು ಕಣ್ಣುಗಳು. ಮೊದಲು ನೀವು ಒಳ್ಳೆಯವರು ಎಂಬುದನ್ನು ತಿಳಿದು ಕೊಳ್ಳಿ. ನಿಮಗಾಗಿ ನಾನು ಕಲ್ಪಿಸಿದ್ದ ಸನ್ನಿವೇಶಗಳಲ್ಲಿ, ನಿಮಗಿಂತಲೂ ಬೇರೆ ಯಾರೂ ಸಂಭಾವಿತರಾಗಿ ನಡೆದುಕೊಂಡಿರಲು ಸಾಧ್ಯವಿಲ್ಲ. ನಾನು ನಿಮ್ಮನ್ನು ಆಗಿಂದಾಗ್ಗೆ ಗಮನಿಸುತ್ತಲೇ ಬಂದಿದ್ದೇನೆ. ನಿಮಗೆ ಸಹಾಯ ಮಾಡುವುದಕ್ಕೇ ಹಾಗೆ ಗಮನಿಸಿದೆ.

ನೀವು ಸಂತೋಷದಿಂದ ಬಾಳಬೇಕೆಂಬುದೇ ನನ್ನ ಹಿರಿಯಾಶೆ. ನಾನು ನಿಮಗೆ ಜೀವನ ನೀಡಲು ತೀರ್ಮಾನಿಸಿಬಿಟ್ಟೆ. ಏಕೆಂದರೆ ಅದು ನಿಮ್ಮ ಜೀವನ. ನಾನು ಅದನ್ನು ಹೇಗೋ ಆಕ್ರಮಿಸಿಕೊಂಡೆ. ಅದಕ್ಕೆ ಪ್ರಾಯಶ್ಚಿತ್ತವಾಗಿ ಅದನ್ನು ನಿಮಗೇ ಹಿಂದಿರುಗಿಸಿ ಕೊಡುತ್ತಿದ್ದೇನೆ.

ನೀವು ಒಂದಾಗಿ ಬಾಳಬೇಕೆಂಬುದು ನನ್ನ ಪ್ರೀತಿಯ ಕಟ್ಟಳೆ. ಇದನ್ನು ನೀವು ಸ್ವಲ್ಪವೂ ತಡವರಿಸದೆ ಅಂಗೀಕರಿಸಬೇಕು. ಇದಕ್ಕಾಗಿ ಚಿಂತಿಸುವುದೋ, ತಡವರಿಸುವುದೋ, ನಿರಾಕರಿಸುವುದೋ ಹೇಡಿಗಳ ಲಕ್ಷಣ.

ಸುತ್ತಲಿರುವ ಲೋಕದ ಬಗ್ಗೆ ನಿಮಗೆ ಚಿಂತೆ ಬೇಡ. ಒಳ್ಳೆಯ ಮನುಷ್ಯರೂ ಲೋಕದಲ್ಲಿ ತುಂಬ ಇದ್ದಾರೆ. ಅನ್ಯರ ಜೀವನದಲ್ಲಿ ತಲೆಯಿಟ್ಟು ಅವರಿಗೆ ದುಃಖ ನೀಡುವುದೇ ಕೆಲವರಿಗೆ ಮುಖ್ಯವಾದ ಕಸುಬಾಗಿದೆ. ಅವರಿಗಾಗಿ ನೋಡಿದರೆ ಯಾವ ಒಳ್ಳೆಯ ಕೆಲಸವೂ ಇಲ್ಲಿ ನಡೆಯುವುದಿಲ್ಲ. ನಾವು ಬಾಳಬೇಕು; ಇತರರಿಗೂ ಬಾಳುವುದಕ್ಕೆ ದಾರಿ ಬಿಡಬೇಕು. ಇದೇ ಇಂದಿನ ಜಗತ್ತಿಗೆ ಬೇಕಾದ ಸೂತ್ರ.

ಇಲ್ಲಿ ನಾನು ಇರುವುದಕ್ಕಿಂತ ಹೆಚ್ಚು ಸಂತೋಷದಿಂದ ಬರ್ಮಾದಲ್ಲಿ ಇರುತ್ತೇನೆ. ನನ್ನ ಬಗ್ಗೆಯ ಚಿಂತೆ ನಿಮಗೆ ಬೇಡ. ನಿಮ್ಮ ಜೀವನದ ಸುಖವೇ ನನ್ನ ಬಾಳಿನ ಸ್ವರ್ಗ ಸುಖ. ನಿಮ್ಮ ದುಡಿಮೆಯನ್ನೂ ನಾನು ಬಿಟ್ಟು ಹೋಗುವ ದ್ರವ್ಯವನ್ನೂ ನೀವು ಬಾಳಿನಲ್ಲಿ ಕಷ್ಟಪಡುತ್ತಿರುವವರ ಹಿತಕ್ಕಾಗಿ ಉಪಯೋಗಿಸಿ.

ನಾನು ಆಗಿಂದಾಗ್ಗೆ ಕಾಗದ ಬರೆಯುತ್ತೇನೆ. ನೀವೂ ಉತ್ತರ ಬರೆಯುತ್ತಿರಿ.

ಮುಖ್ಯ ವಿಷಯ: ಕಾದಂಬರಿಯ ಹಸ್ತಪ್ರತಿಯನ್ನು ನಾನು ಓದಿದೆ. ಅದರ ಮುಕ್ತಾಯವು ಇನ್ನು ಸುಖದಾಯಕವೇ. ಬೇಗನೆ ಅದಕ್ಕೊಂದು ಸೊಗಸಾದ ಮುಕ್ತಾಯವನ್ನು ಬರೆದು, ಪುಸ್ತಕವು ಬಂದ ತಕ್ಷಣ ಪ್ರಥಮ ಪ್ರತಿಯನ್ನು ನನಗೆ ಕಳುಹಿಸಿಕೊಡಿ."

"ಆದ್ದರಿಂದ ಇಂದಿನ ವಿಮಾನದಲ್ಲಿ ಬರ್ಮಾಗೆ ಹೋಗುತ್ತೇನೆ. ಮೊದಲೇ ರಹದಾರಿಯನ್ನು ಪಡೆದುಕೊಂಡಿದ್ದೇನೆ. ದಯವಿಟ್ಟು ನನ್ನನ್ನು ಹುಡುಕುವ ಪ್ರಯತ್ನದಲ್ಲಿ ವ್ಯರ್ಥವಾಗಿ ಅಲೆಯಬೇಡಿ. ನನ್ನ ಪ್ರೀತಿಗೆ ನೀವು ಒಳಗಾಗಬೇಕು. ಮತ್ತೆ ನಿಮ್ಮನ್ನು ಕೇಳಿಕೊಳ್ಳುತ್ತೇನೆ. ನೀವು ಒಂದಾಗಿ ಬಾಳಿರಿ. ನಿಮಗೆ ನನ್ನ ಹೃದಯಪೂರ್ವಕ ಶುಭಾಶಯಗಳು.

**ನಾರಾಯಣಸ್ವಾಮಿ."**

ಒಂದೇ ಶೂನ್ಯಮಯ ಬಯಲಾಗಿ ಕಂಡ ಆ ವಿಮಾನ ನಿಲ್ದಾಣದಲ್ಲಿ ನಾನೂ ಲಲಿತಳು ಮಾತ್ರ ಈಗ ನಿಂತೆವು. ಈ ವಿಶಾಲ ಪ್ರಪಂಚದಲ್ಲಿ ಗಂಡೂ ಹೆಣ್ಣಾಗಿ ಎರಡೇ ಎರಡು ಜೀವಿಗಳು ಮಾತ್ರ ಉಸಿರು ಬಿಡುತ್ತಿದ್ದರೆ ಹೇಗಿರುತ್ತಿತ್ತೋ ಹಾಗಿತ್ತು ನನಗೆ. ನಾನೂ ಅವಳೂ ಕಾರಿನ ಕಡೆಗೆ ನಡೆದೆವು. ಕಾರು ಮನೆಗೆ ಬಂದು ಸೇರುವ ತನಕ ಅವಳ ಅಳು ಬಿಕ್ಕಳಿಕೆಗಳು ನಿಲ್ಲಲಿಲ್ಲ.

ಮನೆಯ ಮಹಡಿಯ ಮೇಲಿನ ಕೋಣೆಯಲ್ಲಿ ಅವರ ಆ ದೊಡ್ಡ ಭಾವಚಿತ್ರವನ್ನು ಕಂಡ ತಕ್ಷಣ ಮೈಮರೆತು ಅದರ ಮುಂದೆ ಉಕ್ಕಿ ಹರಿಯು

ತ್ತಿರುವ ಕಣ್ಣೀರಿನಿಂದ ನಿಂತೆ. ನನಗೆದುರಿನಲ್ಲಿ ನನ್ನ ಹಾಗೇ, ಲಲಿತ ಹರಿದೋಡುತ್ತಿರುವ ಕಣ್ಣೀರನ್ನು ಒರೆಸಿಕೊಳ್ಳದೆ ಕೈ ಜೋಡಿಸಿ ನಿಂತಿದ್ದ ಬಹಳ ಹೊತ್ತು ಕಳೆದ ಮೇಲೇ ನನಗೆ ತಿಳಿಯಿತು.

ನಾರಾಯಣಸ್ವಾಮಿಯವರ ಪ್ರೀತಿಯ ಕೈ ಎಲ್ಲಿಂದಲೋ ಬ ನನ್ನ ಕಣ್ಣೀರನ್ನು ಒರೆಸುವ ಹಾಗೂ, ನನ್ನ ಕಿವಿಗಳಲ್ಲಿ ಅವರ ಸ್ವರ,

"ಇವಳು ಈಗ ನಿಮ್ಮ ಗೆಳತಿ ಮಾತ್ರವಲ್ಲ; ಸಂಗಾತಿ"

—ಎಂದು ಹೇಳುವ ಹಾಗೂ ನನಗೆ ಭಾಸವಾಯಿತು.

ನನ್ನ ಕೈ ಅವಳ ಕಣ್ಣೀರನ್ನು ಒರೆಸಲು ಧಾವಿಸಿತು.



# ಅರಿಕೆ

ಈ ಕಾದಂಬರಿಯಲ್ಲಿ ಒಂದು ಭಾಗವನ್ನು 'ನಾನು' ಎಂ
ಪ್ರಾರಂಭಿಸಿ ಬರೆದು ಮುಗಿಸಿದಾಗಲೇ, ಇದೇ ರೀತಿ ಮುಂದುವರೆಸಿ ಬರೆಯ
ವುದರಲ್ಲಿ ಇರುವ ಶ್ರಮಗಳನ್ನು ಅರಿತೆ. ಆದರೂ ಹೀಗೆ ಬರೆಯುವುದ
ಮೂಲಕ ಓದುಗರಿಗೆ ಸಮೀಪವಾಗಿ ತೀರ ಸಮೀಪದಲ್ಲಿ ಇದ್ದು, ಮುಖ
ಕತೆ ಹೇಳುವ ಸುಖಾನುಭವವುಂಟಾಗುತ್ತದೆ. ಈ ಸುಖಾನುಭವವನ
ಬಯಸುವ ನಾನು ಸ್ವಲ್ಪ ಶ್ರಮವನ್ನು ಲೆಕ್ಕಿಸಬಹುದೆ?

ಆಂಗ್ಲವು ಅಂತರ್‍ರಾಷ್ಟ್ರೀಯ ಭಾಷೆಯಾಗಿದೆ. ಸಾವಿರಗಟ್ಟಲೆ ಆಂ
ಕತೆಗಳು ಹೊರಬಿದ್ದಿವೆ. ಹಾಗಿದ್ದೂ 'ಇನ್ನೂ ನಮ್ಮಲ್ಲಿ ಶ್ರೇಷ್ಠ ಪ್ರೇ
ಕತೆಗಳು ಹೆಚ್ಚಾಗಿ ಹೊರಬಿದ್ದಿಲ್ಲವಲ್ಲಾ!' ಎಂದು ನೊಂದು ನುಡಿಯುತ್ತಾ
ಆ ದೇಶದ ವಿಮರ್ಶಕರು. 'ಎಂದೆಂದೂ ಅಚ್ಚಳಿಯದೆ ಶಾಶ್ವತವಾಗಿ ನಿ
ತಕ್ಕ ಈ ವಿಷಯದ ಬಗ್ಗೆ ಏಕೆ ಇನ್ನೂ ಹೆಚ್ಚುಹೆಚ್ಚಾಗಿ ನವೀನ ಸಾಹಿತ
ಕೃತಿಗಳು ಮೂಡಿಬರಲಿಲ್ಲ?' ಎಂದು ಅವರು ಕೇಳುತ್ತಾರೆ.

ಈ ಸ್ಥಿತಿಯಲ್ಲಿ ಇತ್ತೀಚೆಗೆ ತಾನೇ ಆಧುನಿಕ ತಮಿಳು ನಮ್ಮಲ
ಹುಟ್ಟಿದೆ. ಇದುವರೆಗೂ ಸಣ್ಣ ಕತೆಯಲ್ಲಿ ತೇಲುತ್ತಿದ್ದ ಆಧುನಿಕ ಸಾಹಿತ್ಯ
ಈಗ ತಾನೇ ಕಾದಂಬರಿಯ ಹೆಜ್ಜೆ ಹಾಕುತ್ತಿದೆ. ಆ ಪುಟ್ಟ ಮುದ್ದ
ಮಗುವಿಗೆ ಈ ಪ್ರೇಮಕತೆಯು ಒಂದು ಪ್ರೀತಿಯ ಪುಷ್ಪವಾಗಿ ಮುಡಿಸಲ
ಬಯಸುತ್ತೇನೆ. ಈ ಕತೆಯಲ್ಲಿ ಬರುವ ಮುಖ್ಯ ಪಾತ್ರಗಳು, ಚಿಂತ
ನೋಡಲಾರದ ಜನರ ನಿಂದನೆಗೊಳಗಾದವರು; ವಿದ್ಯೆ, ಸಂಸ್ಕೃತಿಯನ್ನರಿಯ
ದವರಿಂದ ಅಪಹಾಸ್ಯಕ್ಕೆ ಗುರಿಯಾದವರು; ಮಾನವ ಹೃದಯವನ
ಹೊಂದದವರಿಂದ ಸನ್ಮಾನಿಸಲ್ಪಡದ ಮನುಷ್ಯರು.

ನೀವು ಈ ಕಾದಂಬರಿಯನ್ನು ಓದಿದ ಬಳಿಕ ಅವರನ್ನು ಕುರಿತು ಏನು ಹೇಳುತ್ತೀರಿ? ತಮಿಳುನಾಡಿನ ಓದುಗರ ತೀರ್ಪು ಏನು? ವಿಮರ್ಶಕರ ತೀರ್ಮಾನವು ಯಾವುದು?

ಪ್ರೀತಿಯಲ್ಲಿ ಅಚಲ ನಂಬಿಕೆಗೊಂಡವನು ನಾನು. ಎಂದೋ ಬರಲಿರುವ ಆ ಪ್ರೀತಿಯ ಪ್ರಪಂಚಕ್ಕಾಗಿ ಇಂದಿನಿಂದಲೇ ಕನಸು ಕಾಣುವವನು: ಆ ಪ್ರಪಂಚದಲ್ಲಿ ಜಾತಿ, ಸಮಯ, ಬಣ್ಣ, ಹಣ ಎಲ್ಲವೂ ಪ್ರೀತಿಗೆ ತಲೆಬಾಗಿ, ದಾರಿಬಿಟ್ಟು, ಪ್ರೀತಿಯ ಸೇವಕರಾಗಿ ನಿಲ್ಲುತ್ತದೆ; ಅಥವಾ ಪ್ರೀತಿಯಲ್ಲಿ ನಾಶವಾಗುತ್ತದೆ. ಪ್ರೀತಿಯನ್ನು ಅರಿಯಬಲ್ಲವರಿಂದಲೇ ಒಳಿತನ್ನೂ ಕೆಡುಕನ್ನೂ ತುಲನ ಮಾಡಿ ನೋಡಲು ಸಾಧ್ಯ.

ಈ ಕಾದಂಬರಿಯನ್ನು ನಾನು ಯೋಚಿಸಬಲ್ಲವರಿಗಾಗಿಯೂ, ಯೋಚಿಸ ಬಯಸುವವರಿಗಾಗಿಯೂ ಬರೆಯುತ್ತೇನೆ. ದೇಹದೊಂದಿಗೆ ಅಂಟಿಯೂ ಅಂಟದೆ ಹೃದಯದೊಳಗೇ ಪ್ರಕಾಶಿಸುವ ಬೆಳಕಿನ ಪ್ರಕಾಶವನ್ನು ನಾನು ನನ್ನ ಮನಸ್ಸಿನ ರೀತಿಯಲ್ಲಿ ಹೇಳಿದ್ದೇನೆ. ಈ ಕತೆಯ ಮೂಲಕ ನಾನು ಮಾಡುತ್ತಿರುವುದು ಒಂದೇ ವಿಧ ಪ್ರಚಾರವೇ; ಪ್ರೀತಿಯ ಪ್ರಚಾರ. ಆ ಪ್ರೀತಿಯಿಂದಲೇ ತಾನೇ ಜಗತ್ತು ಇನ್ನೂ ಅಳಿಯದೆ ಉಳಿದಿದೆ? ನಂಬಿಕೆಯಿಂದ ಚಡಪಡಿಸುತ್ತಿದೆ? ಒಂದು ರೂಪತಾಳಲಿದೆ?

ತಮಿಳಿನ ಆಚಾರ್ಯರು ಡಾಕ್ಟರ್ ಮು. ವರದರಾಜನ್‌ರವರು ಮುಂದೆ ಬಂದು ಇದಕ್ಕೆ ಮುನ್ನುಡಿಯನ್ನು ನೀಡಲು ಒಪ್ಪಿದ್ದಾರೆ. ಅವರಿಗೂ ಪ್ರಕಟಣ ಕಾರ್ಯದಲ್ಲಿ ನೆರವಾದ ಎಲ್ಲರಿಗೂ ನನ್ನ ವಂದನೆಗಳನ್ನೂ ಪ್ರೀತಿಯನ್ನೂ ತಿಳಿಸಿಕೊಳ್ಳುತ್ತೇನೆ.

ಓದುಗರನ್ನು ನಾನು ಮರೆತಿಲ್ಲ. ಅವರಿಗೆಂದು ತಾನೇ ನಾನು ಈ ಕಾದಂಬರಿಯನ್ನೇ ಬರದಿದ್ದೇನೆ.

ತಿರುಚ್ಚಿ
೨೩–೧೦–೫೧

**ಅಖಿಲನ್.**

## ಹರಕೆ

ಪ್ರೇಮಕತೆಯೆಂದರೆ ಅದು ಸಭ್ಯತೆಯ ಕಟ್ಟಳೆಯನ್ನು ಮೀರಿ ಬರೆ
ಲ್ಪಟ್ಟ ಕತೆಯೆಂದೂ, ಅದನ್ನು ದೂರವಿಡುವುದೇ ಲೇಸೆಂದು ಹಲವ
ಭಾವಿಸುವ ಪರಿಸ್ಥಿತಿ ಇಂದು ನಮ್ಮಲ್ಲಿದೆ. ಪ್ರೇಮವೆಂಬುದು ಸಭ್ಯಜೀವ
ದಲ್ಲಿ ಸ್ಥಳ ಗಳಿಸಲು ತಕ್ಕ ಭಾವವೆಂಬುದು ಸತ್ಯವೇ ಆದರೆ, ಪ್ರೇಮವನ
ಕುರಿತ ಕಲಾತ್ಮಕ ಕಲ್ಪನೆಯೂ ಸಭ್ಯತೆಯ ಕಟ್ಟಳೆಯೊಳಗೆ ನೆಲೆಗೊಂ
ನಿಲ್ಲಲು ಸಾಧ್ಯ. ಶ್ರೀ ಅಖಿಲನ್‌ರವರು ಬರೆದಿರುವ '**ಗೆಳತಿ**' ಎಂಬ
ಕತೆಯೇ ಇದಕ್ಕೆ ಒಳ್ಳೆಯ ಉದಾಹರಣೆ. ಇದರಲ್ಲಿ ಪ್ರೇಮಿಗಳ ಹೃದಯ
ಹಲವು ಬಗೆಯ ಭಾವಗಳು ಅಲ್ಲಲ್ಲಿ ವಿವರಿಸಲ್ಪಡುತ್ತವೆ. ಆದರೂ ಭಾ
ಸನ್ನಿವೇಶಗಳು ಮತ್ತು ಅದರ ಪರಿಣಾಮಗಳು ಮುಂತಾದವುಗಳಲ್ಲಿ ಒಂ
ರಲ್ಲಾದರೂ ಸಭ್ಯತೆಯ ಕಟ್ಟಳೆ ಅತಿಕ್ರಮಿಸಲ್ಪಡಲಿಲ್ಲ. ಕತೆಗಾ
ರಾಗಿಯೂ ಪತ್ರಿಕಾಸಂಪಾದಕರಾಗಿಯೂ ಇರುವ 'ಸೋಮು' ತಾ
ಹೇಳುವ ಹಾಗೆ–ಸ್ವಯಂ ಕಲ್ಪಿತವಾಗೇ ಓಡುತ್ತದೆ. ಹಾಗೆ ಹೇಳುವಂಥ
ಅವಕಾಶವಿರುವ ಒಂದು ಗ್ರಂಥದಲ್ಲಿ ಭಾವೋದ್ರೇಕಗಳನ್ನು ತಡೆಯಿಲ್ಲ
ತುಂಬಬಹುದು. ಅಂತಹುದರಲ್ಲೂ ಪವಿತ್ರ ಕತೆಯಾಗಿ ಇದು ಕಂಗೊಳಿ
ತ್ತಿದೆಯೆಂದರೆ, ಕತೆ ಜನಿಸಿದ ಹೃದಯವನ್ನೇ ನಾವು ಪ್ರಶಂಸಿಸಬೇಕು.

ಸಮಾಜ ರಚನೆಯ ಪ್ರಕಾರ ಲಲಿತ ನಾರಾಯಣಸ್ವಾಮಿ
ಹೆಂಡತಿಯಾಗಿ (ಪ್ರೇಯಸಿಯಲ್ಲ) ಜೀವನ ನಡೆಸುತ್ತಿರುತ್ತಾಳೆ. ಅವ
ಪ್ರೀತಿಗೆ ಪಾತ್ರರಾದ ಗೆಳೆಯರಂತೆ ಹೋಗಿ ಸೇರಿದ ಸೋಮು ಅವಳ ಬ

ತೋರಿದ ಪ್ರೀತಿ ಕ್ರಮೇಣ ಬೆಳೆದು ಪ್ರೇಮವಾಗಿ ಮಾರ್ಪಡುತ್ತದೆ. ಲಲಿತಳೂ ಸೋಮುವಿನ ಪ್ರೇಯಸಿಯಾಗುತ್ತಾಳೆ; ಕತೆಯ ಅಂತ್ಯದಲ್ಲಿ ಸಂಗಾತಿಯೂ ಆಗುತ್ತಾಳೆ. ಇಂಥಾ ಒಂದು ಸಂಭವ ಕಲ್ಪನಾಲೋಕದಲ್ಲಿ ನಡೆಯುವುದಾದರೆ, ನಾರಾಯಣಸ್ವಾಮಿ ನಮ್ಮ ನಿಂದೆಗೂ ದ್ವೇಷಕ್ಕೂ ಒಳಗಾಗಬೇಕು; ಅಥವಾ ವಿಷಕ್ಕೂ, ಬಂದೂಕಿಗೂ ಬಲಿಯಾಗಬೇಕು. ನಮಗಿಂತಲೂ ಹೆಚ್ಚಾಗಿ ಲಲಿತ ಅವರನ್ನು ದ್ವೇಷಿಸಲೂ ನಿಂದಿಸಲೂ ಮುಂದಾಗಬೇಕು. ಆ ವಿಷವೂ, ಬಂದೂಕವೂ ಅವಳ ಕೈಯಲ್ಲಿ ಹಿಡಿಯುವ ಹಾಗೆ ನಾವು ಕಲ್ಪನೆ ಮಾಡಿಕೊಳ್ಳಬೇಕು. ಇಷ್ಟೆಲ್ಲ ಕುತಂತ್ರಕ್ಕೂ, ಹಿಂಸೆಗೂ ಸೋಮು ಸಹಕರಿಸಿ, ಪ್ರೇರೇಪಿಸುವುದಾಗಿಯೂ ಕಲ್ಪಿಸಬೇಕು. ಇಷ್ಟೆಲ್ಲವೂ ಇದ್ದರೇನೇ ಒಬ್ಬನ ಹೆಂಡತಿ ಇನ್ನೊಬ್ಬನ ಪ್ರೇಯಸಿಯಾಗಿ ಮಾರ್ಪಟ್ಟು ಕೊನೆಗೆ ಸಂಗಾತಿಯಾಗಬಹುದು. ಆದರೆ ಈ ಗ್ರಂಥದ ಕಲ್ಪನೆಯಲ್ಲಿ ಇವು ಯಾವುದಕ್ಕೂ ಸ್ಥಳವೇ ಇಲ್ಲ. ನೆಟ್ಟಗೆ ನಮ್ಮ ಮನಸ್ಸು ನಾರಾಯಣಸ್ವಾಮಿಯವರನ್ನು ದೂಷಿಸುವುದಕ್ಕೂ ಸಾಧ್ಯವಿಲ್ಲ; ದ್ವೇಷಿಸುವುದಕ್ಕೆ ಸಾಧ್ಯವಿಲ್ಲ. ಲಲಿತ ಅವರಲ್ಲಿಟ್ಟುಕೊಂಡಿದ್ದ ಪ್ರೀತಿಯೂ ಗೌರವವೂ ಕಡೆಯ ತನಕ ಅಚ್ಚಳಿಯದೆ ಉಳಿಯುತ್ತದೆ. ಗಂಡಹೆಂಡಿರಾದ ಅವರಿಬ್ಬರ ಬಳಿಯೂ ಸೋಮು ತಾಳುವ ಸಂಪ್ರೀತಿಯನ್ನು ಕಂಡು ವಿಸ್ಮಯಗೊಳ್ಳಬೇಕಾಗಿದೆ. ನಮ್ಮ ದ್ವೇಷ ದೂಷಣಗಳು ಹಿಡಿಯುವುದೇ ಬೇರೆ ದಾರಿಯಾಗಿದೆ; ಸೋಮುವಿಗೂ ಲಲಿತಳಿಗೂ ಮಧ್ಯೆ ನಿಂತು ಕೆಡುಕನ್ನು ಬಯಸುವ ಸೇತುರಾಮನನ್ನೇ ದ್ವೇಷಿಸಿ ಕೋಪಗೊಳ್ಳುತ್ತೇವೆ. ಆದರೆ ಅದ್ದಿ ಬರಬಹುದೆಂದು ಇದಿರು ನೋಡಿದ ನಾರಾಯಣಸ್ವಾಮಿಯಾದರೋ ನಮಗೆ ಗೌರವನೀಯರಾಗುತ್ತಾರೆ. ಸಮಾಜವು ಮಾಡಲಾರದ ಮಹಾ ಸಾಹಸ ಕೃತ್ಯವನ್ನು ಮಾಡಿ ನಮ್ಮ ಹೃದಯದಲ್ಲಿ ತ್ಯಾಗವೀರರಾಗಿ ಬೆಳಗುತ್ತಾರೆ. ಪ್ರೇಮ ಲೋಕದಲ್ಲಿ ಅಸಮಾನ ಕ್ರಾಂತಿ– ಪ್ರೀತಿಯ ಕ್ರಾಂತಿ– ನಡೆದು ವಿಜಯಗಳಿಸುತ್ತದೆ. ಕ್ರಾಂತಿಯನ್ನು ಯಾರು ಇದಿರಿಸಿ ಮುರಿಯಬೇಕಾಗಿತ್ತೋ, ಅವರೇ ಶಾಂತಿಯಿಂದ ಶುಭವ ಕೋರಿ ಅನುಗ್ರಹಿಸುತ್ತಾರೆ; ಜಯ ಗಳಿಸುವ ಹಾಗೂ ಮಾಡುತ್ತಾರೆ.

'ಲೋಕವು ಬಾಳಲರಿಯದವರಿಗಾಗಿ ಮೊಸಳೆ ಕಣ್ಣೀರಿಡುತ್ತ
ಬಾಳಬಯಸುವವರಿಗೆ ಅಡ್ಡಿಯಾಗಿ ನಿಲ್ಲುತ್ತದೆ' ಎಂದು ಕಾದಂಬರಿಗಾ
ಪದೇ ಪದೇ ಆಡಿತೋರಿಸುತ್ತಾರೆ. ಆದರೆ ಅಂಥಾ ಲೋಕದಲ್ಲಿ ಒಂ
ನಾರಾಯಣಸ್ವಾಮಿಯ ಹಿರಿಮೆಯನ್ನರಿತು ಗೌರವಿಸುವಂಥಾ ಲಲಿತಳನ
ಸೋಮುವನ್ನೂ ಸೃಷ್ಟಿಸಿದ್ದು ಕಾದಂಬರಿಗಾರರ ಕಲ್ಪನಾ ಕೌಶಲ್ಯಕ್ಕೆ ಭ
ನಿರೂಪಣೆ.

ಶ್ರೀ ಅಖಿಲನ್‌ರವರ ಕಲಾಸೇವೆಯು ಬಾಳಿ ಬೆಳಗಲಿ.

ಮದ್ರಾಸು. **ಮು. ವರದರಾಜನ**



## ★ನಮ್ಮ ಮುಂದಿನ ಪ್ರಕಟಣೆ

ಕಳೆದ ವರ್ಷ ತಾನೇ ಪ್ರಕಟವಾದ 'ನಿಟ್ಟುಸಿರು' ಕಥಾಸಂಕಲನದ ಮೂಲಕ ಕನ್ನಡ ಸಾಹಿತ್ಯ ಪ್ರೇಮಿಗಳ ಹೃದಯವನ್ನು ಸೂರೆಮಾಡಿದ

**ಶ್ರೀ ಸೂ. ವೆಂ. ಆರಗ, ಬಿ.ಎ (ಆನರ್ಸ್). ಅವರ**

# ಕುಸುಮ ಸಂಕೋಲೆ

ನಾಗರಿಕತೆಯ ಆದಿಯಿಂದ ತತ್ವಜ್ಞಾನಿಗಳೂ ಕವಿಗಳೂ ಹೆಣ್ಣಿಗೆ 'ಅಗ್ರಾಹ್ಯ'ಳೆಂಬ ಮುದ್ರೆಯೊತ್ತಿ, ಅಪ್ರಮೇಯವನ್ನಾದರೂ ಅರ್ಥಮಾಡಿಕೊಳ್ಳಬಹುದು, ಹೆಣ್ಣಿನ ಹೃದಯದಾಳಕ್ಕಿಳಿದು ಅದರ ಸ್ವರೂಪವೇನೆಂಬುದನ್ನರಿಯಲಾಗದು ಎಂದು ಸಾರಿದ್ದಾರೆ. ಆದರೆ ತರುಣ ಸಾಹಿತಿ ಆರಗರ ಲೇಖಣಿ ಪರಂಪರಾನುಗತವಾಗಿ ಬಂದ ಈ ಮೂಢಕಲ್ಪನೆಗೊಂದು ಸವಾಲಿನಂತಿದೆ. ಪ್ರಪಂಚದ ಜನಸಂಖ್ಯೆಯಲ್ಲಿ ಅರ್ಧಕ್ಕಿಂತ ಹೆಚ್ಚು ಸ್ಥಾನವನ್ನಾಕ್ರಮಿಸಿರುವ ಸ್ತ್ರೀಯ ಬಗೆಗೆ 'ನಿಟ್ಟುಸಿರು' ಸಂಕಲನದಲ್ಲಿ ಶ್ರೀ ಆರಗರು ತೋರಿದ ಒಂದು ವಿಶಿಷ್ಟವಾದ ಅನುಕಂಪ, ಅರಿವುಗಳೇ ಪ್ರಕೃತ ಈ ಕಾದಂಬರಿಯಲ್ಲೂ ಮುಂದುವರಿದು ಬಲಗೊಂಡಿವೆ. 'ಕಿಂ ಕ್ರೂರಂ ಸ್ತ್ರೀ ಹೃದಯಂ' ಎಂಬ ಕವಿ ಆರಗರ 'ಕುಸುಮ ಸಂಕೋಲೆ'ಗೆ ಶರಣು ಹೊಡೆಯಲೇಬೇಕು.

ಕಾದಂಬರಿಯ ನಾಯಕಿ ರತ್ನ ಸಕಾಲಕ್ಕೆ ಋತುಮತಿಯಾಗದೆ ಗಂಡನಿಂದ ಪರಿತ್ಯಕ್ತಳಾದವಳು. ಅವಳ ಬರಡು ಹೃದಯದಲ್ಲಿ ಒಲವು ಚಿಗುರಿದುದು ಸರಸಪ್ಪನ ಗೆಳೆತನದಿಂದ, ಆಕೆಯ ತಮ್ಮ ಚಂದ್ರುವಿನ ಪರಿಚಯದಿಂದ. ಆದರೆ ಚಿಗುರು ಬಲಿತು, ಹೂತು, ಹಣ್ಣಾಗುವುದರೊಳಗೆ ಲೋಕನಿಂದೆ, ಡಾಕ್ಟರ್ ಕುಬೇರನ ನೀಚಬುದ್ಧಿಗಳ ಜೋಡಿ ಅಲುಗಿನ ನಡುವೆ ರತ್ನ ಸಿಕ್ಕಿ ತತ್ತರಿಸಿದಳು. ಅವಳು ಎಲ್ಲರನ್ನೂ ಅರ್ಥಮಾಡಿಕೊಂಡಳು; ಆದರೆ ಯಾರೂ ಅವಳನ್ನು ಅರ್ಥಮಾಡಿಕೊಳ್ಳಲಿಲ್ಲ. ರತ್ನಳ, ರತ್ನಳಂಥಹ ನೂರಾರು ಭಗ್ನಹೃದಯಗಳ ಕತೆಯೇ ಈ ಕಾದಂಬರಿ.

# ನಿಮ್ಮ ಪ್ರತಿಗಳಿಗೆ ಇಂದೇ ಬರೆಯಿ

# ಆದರ್ಶ

(ಕಾದಂಬರಿ)

ಲೇಖಕರು : ಶ್ರೀ ಪುಟ್ಟಣ್ಣ

೩೦೦ ಪುಟಗಳು. ತ್ರಿವರ್ಣ ರಕ್ಷ

ಬೆಲೆ ಒಂದೂವರೆ ರೂಪಾಯಿ ಮಾತ್ರ.

ಇದರಲ್ಲಿ ಲೇಖಕರು ಸರಳ, ಸುಂದರ ಕತೆಯೊಂದ
ಹಿನ್ನೆಲೆಯಲ್ಲಿ ಹಳ್ಳಿಗರ ನಿರ್ಮಲ, ನಿಷ್ಕಳಂಕ ಹೃದಯದ
ಚಿಮ್ಮುವ ಮಾನವೀಯ ಅಂತಃಕರಣದ ಸೊದೆಯನ್ನು ನಿಮ್ಮ
ಉಣಬಡಿಸಿದ್ದಾರೆ. ಹೊನ್ನಯ್ಯ, ಮುನಿಯಮ್ಮ, ಪುಟ್ಟಪ್ಪ
ಗೋವಿಂದಯ್ಯ, ಗಿರಿಜಮ್ಮ, ಸರೋಜರಂತಹ ಹಣ್ಣು ನೇ
ದಿಂದಾಯ್ದು ತೆಗೆದು ಕಡೆದ ಪಾತ್ರಗಳಿಗಾಗಿ, ಅವುಗಳ ಭಾ
ಜೀವನದ ಸೂಕ್ಷ್ಮ ಚಿತ್ರಣಕ್ಕಾಗಿ, ಯಾವ ರೀತಿಯ 'ಸಾಹಿತ್ಯ
ಕಸರತ್ತೂ' ಇಲ್ಲದೆ ನೇರವಾಗಿ, ಮನತಾಗುವ ಕಥನಕ್ರಮಕ್ಕಾಗಿ
ಭಾವಗರ್ಭಿತ ಭಾಷೆಗಾಗಿ, ಅಲ್ಲದೆ ಹಳ್ಳಿಯ ತೊರೆಯಂತೆ ಸದ್ದ
ಮಾಡದೆ ಸರಾಗವಾಗಿ ಹರಿಯುವ ಶೈಲಿಗಾಗಿ

ಈ ಕಾ ದ ಂ ಬ ರಿ

ನಿಮ್ಮನ್ನು ಸೆರೆ ಹಿಡಿಯುತ್ತದೆ

★ ನಮ್ಮ ಮುಂದಿನ ಪ್ರಕಟಣೆ

ಕಳೆದ ವರ್ಷ ತಾನೇ ಪ್ರಕಟವಾದ 'ನಿಟ್ಟುಸಿರು' ಕಥಾಸಂಕಲನದ ಮೂಲಕ ಕನ್ನಡ ಸಾಹಿತ್ಯ ಪ್ರೇಮಿಗಳ ಹೃದಯವನ್ನು ಸೂರೆಮಾಡಿದ

**ಶ್ರೀ ಸೂ. ವೆಂ ಆರಗ, ಬಿ.ಎ (ಆನರ್ಸ್). ಅವರ**

# ಕುಸುಮ ಸಂಕೋಲೆ

ನಾಗರಿಕತೆಯ ಆದಿಯಿಂದ ತತ್ವಜ್ಞಾನಿಗಳೂ ಕವಿಗಳೂ ಹೆಣ್ಣಿಗೆ 'ಅಗ್ರಾಹ್ಯ'ಳೆಂಬ ಮುದ್ರೆಯೊತ್ತಿ, ಅಪ್ರಮೇಯನನ್ನಾದರೂ ಅರ್ಥಮಾಡಿಕೊಳ್ಳಬಹುದು, ಹೆಣ್ಣಿನ ಹೃದಯದಾಳಕ್ಕಿಳಿದು ಅದರ ಸ್ವರೂಪವೇನೆಂಬುದನ್ನರಿಯಲಾಗದು ಎಂದು ಸಾರಿದ್ದಾರೆ. ಆದರೆ ತರುಣ ಸಾಹಿತಿ ಆರಗರ ಲೇಖಣಿ ಪರಂಪರಾನುಗತವಾಗಿ ಬಂದ ಈ ಮೂಢಕಲ್ಪನೆಗೊಂದು ಸವಾಲಿನಂತಿದೆ. ಪ್ರಪಂಚದ ಜನಸಂಖ್ಯೆಯಲ್ಲಿ ಅರ್ಧಕ್ಕಿಂತ ಹೆಚ್ಚು ಸ್ಥಾನವನ್ನಾಕ್ರಮಿಸಿರುವ ಸ್ತ್ರೀಯ ಬಗೆಗೆ 'ನಿಟ್ಟುಸಿರು' ಸಂಕಲನದಲ್ಲಿ ಶ್ರೀ ಆರಗರು ತೋರಿದ ಒಂದು ವಿಶಿಷ್ಟವಾದ ಅನುಕಂಪ, ಅರಿವುಗಳೇ ಪ್ರಕೃತ ಈ ಕಾದಂಬರಿಯಲ್ಲೂ ಮುಂದುವರಿದು ಬಲಗೊಂಡಿವೆ. 'ಕಿಂ ಕ್ರೂರಂ ಸ್ತ್ರೀ ಹೃದಯಂ' ಎಂಬ ಕವಿ ಆರಗರ 'ಕುಸುಮ ಸಂಕೋಲೆ'ಗೆ ಶರಣು ಹೊಡೆಯಲೇಬೇಕು.

ಕಾದಂಬರಿಯ ನಾಯಕಿ ರತ್ನ ಸಕಾಲಕ್ಕೆ ಋತುಮತಿಯಾಗದೆ ಗಂಡನಿಂದ ಪರಿತ್ಯಕ್ತಳಾದವಳು. ಅವಳ ಬರಡು ಹೃದಯದಲ್ಲಿ ಒಲವು ಚಿಗುರಿದುದು ಸರಸಮ್ಮನ ಗೆಳೆತನದಿಂದ, ಆಕೆಯ ತಮ್ಮ ಚಂದ್ರುವಿನ ಪರಿಚಯದಿಂದ. ಆದರೆ ಚಿಗುರು ಬಲಿತು, ಹೂತು, ಹಣ್ಣಾಗುವುದರೊಳಗೆ ಲೋಕನಿಂದೆ, ಡಾಕ್ಟರ್ ಕುಬೇರನ ನೀಚಬುದ್ಧಿಗಳ ಜೋಡಿ ಅಲುಗಿನ ನಡುವೆ ರತ್ನ ಸಿಕ್ಕಿ ತತ್ತರಿಸಿದಳು. ಅವಳು ಎಲ್ಲರನ್ನೂ ಅರ್ಥಮಾಡಿಕೊಂಡಳು; ಆದರೆ ಯಾರೂ ಅವಳನ್ನು ಅರ್ಥಮಾಡಿಕೊಳ್ಳಲಿಲ್ಲ. ರತ್ನಳ, ರತ್ನಳಂಥಹ ನೂರಾರು ಭಗ್ನಹೃದಯಗಳ ಕತೆಯೇ ಈ ಕಾದಂಬರಿ.

ಯಕ್ಷಗಾನ, ಕಥಕ್ಕಳಿ, ಮಣಿಪುರಿ, ಭಾಗವತರಾಟ, ಚೌ, ಬಂಜಾರ, ದಂಡಿಯ್ಯಾ, ಗಾರ್ಭಾ, ಲಾಬೊರಿ, ಉಂಡಾಡಿಗಳ ಕುಣಿತ, ಪೂರಕ್ಕಳಿ
ಇಂಥ ಅನೇಕ ನೃತ್ಯಗಳು
ನಮ್ಮ ದೇಶದ ಮೂಲೆ ಮೂಲೆಗಳಲ್ಲಿ ಹರಡಿ ಹಬ್ಬಿ ಬಾಳಿವೆ.

**ಈ ನೃತ್ಯಗಳ ಬಗೆಗೆ**

**ಕನ್ನಡದಲ್ಲಿ ಒಂದೇ ಒಂದಾದ ಮೊಟ್ಟಮೊದಲ ಕೃತಿ**

**ಭಾ ರ ತ ದ**

# ಜಾ ನ ಪ ದ ನೃ ತ್ಯ ಗ ಳು

ನೃತ್ಯಕಲೆಯ ಬಗೆಗೆ ಅಧಿಕಾರವಾಣಿಯಿಂದ ಬರೆಯಬಲ್ಲ
ನಾಟ್ಯಾಚಾರ್ಯ ಕುಮಾರ ವೆಂಕಣ್ಣನವರ
ಅಸಮಾನ ಕೃತಿ

ಸಚಿತ್ರ — ಬೆಲೆ ಒಂದು ರೂಪಾಯಿ

★

ಕನ್ನಡಿಗರೆಲ್ಲರೂ ಓದಬೇಕಾದ ಗ್ರಂಥ

**ಅ. ನ. ಕೃ. ರವರ**

# ಕ ರ್ನಾ ಟ ಕ ಪ್ರಾಂ ತ್ಯ

ಬೆಲೆ ಎಂಟಾಣೆ ಮಾತ್ರ.

— ಪ್ರತಿಗಳಿಗೆ —

## ಅರುಣೋದಯ ಪ್ರಕಾಶನ

**ಅರಳೇಪೇಟೆ :: ಬೆಂಗಳೂರು-೨**

★ ಸದ್ಯದಲ್ಲಿಯೇ ಬರಲಿದೆ

ಪ್ರಪಂಚದ ಪ್ರಮುಖ ಭಾಷೆಗಳಿಗೆಲ್ಲಾ
ಶತಮಾನದಲ್ಲಿ ಪ್ರಕಟವಾದ ಉತ್ತಮೋತ್ತ
ಹೆಸರಾಂತವಾಗಿರುವ ರಷ್ಯದ ಮಹ

# ಟಾಲ್‌ಸ್ಟಯ್

ಮಹೋನ್ನತ ಕಾದಂಬರಿ RESU
ಕನ್ನಡ ಅನುವಾದ

# ಸಾವಿನಿಂದ ಬ

ಕನ್ನಡ ಅನುವಾದ: **ಶಾ. ಬಾ**

ಇದರಲ್ಲಿ ಕಲಾವಿದ ಕೌಂಟ್ ಲಿಯೋ ಟಾಲ
ರಷ್ಯಾದ ಸಾಮಾಜಿಕ, ನೈತಿಕ ಹಾಗೂ ಮಾನಸಿ
ಜೀವಪೊಂಗರ ಬಾಳುಬದುಕನ್ನು ಭಾವಪೂರ್ಣ
ಪ್ದಾರಿ. ಶ್ರೀಮಂತ ಯುವಕನ ಪ್ರೇಮಾಲಿಂಗನಕ್ಕೆ
ವಿಲಾಸಕ್ಕಾಗಿ ಇಡೀ ಬದುಕನ್ನೇ ಬಲಿಗೊಟ್ಟ ಕ್ರೈ
ವಳ ಮನೋವೇಧಕ ಕತೆಯೇ ಈ ಕಾದಂಬರಿ.
ಪಾತ್ರಗಳು ಕಣ್ಣೀರು ಮಿಡಿಸಿ ಹೃನ್ಮನಗಳನ್ನು ಮ
ಅನ್ಯಾಯಗಳ ದಿಟ್ಟ ವರ್ಣನೆ–ನಿರೂಪಣೆಗಳು
ಗೆಬ್ಬಿಸುತ್ತವೆ; ಮಾನವತಾವಾದದಿಂದ ಪುಟಗೊ
ಟಾಲ್‌ಸ್ಟಯರ ದೃಷ್ಟಿಕೋನ–ಜೀವನ ದರ್ಶನಗಳ
ಸಹ ಮತಾಂತರಗೊಳಿಸಿ ಮಾನವ ಪ್ರೇಮಿಗಳನ್ನಾಗಿ

ಅರುಣೋದಯ ಪ್ರಕಾ
ಅರಳೇಪೇಟೆ, ಬೆಂಗಳೂರು

